ಪ್ರಕಾಶಕರು: ಶ್ರೀ ಅಜೀತ್ ಸಿ. ಪಟೇಲ್

ದಾದಾ ಭಗವಾನ್ ಆರಾಧನಾ ಟ್ರಸ್ಟ್,

ದಾದಾ ದರ್ಶನ್, 5, ಮಮತಾ ಪಾರ್ಕ್ ಸೊಸೈಟಿ,

ನವ ಗುಜರಾತ್ ಕಾಲೇಜು ಹಿಂಬಾಗ, ಉಸ್ಮಾನಪುರ,

ಅಹ್ಮದಾಬಾದ್ - 380014, ಗುಜರಾತ್.

ಫೋನ್: (079) 39830100



ಪ್ರಥಮ ಆವೃತ್ತಿ: 1000 ಪ್ರತಿಗಳು ನವೆಂಬರ್ 2018

ಭಾವ ಮೌಲ್ಯ: 'ಪರಮ ವಿನಯ ಹಾಗು ನಾನು ಏನನ್ನೂ ತಿಳಿದಿಲ್ಲ' ಎಂಬ ಭಾವನೆ!

ದ್ರವ್ಯ ಮೌಲ್ಯ: 20.00 ರೂಪಾಯಿಗಳು

ಮುದ್ರಣ: ಅಂಬಾ ಆಫ್ ಸೆಟ್

ಬಿ-99, ಎಲೆಕ್ಟ್ರಾನಿಕ್ಸ್ GIDC,

ಕ-6 ರೋಡ್, ಸೆಕ್ಟರ್-25, ಗಾಂಧಿನಗರ - 382044

ಫೋನ್: (079) 39830341

# ತ್ರಿಮಂತ್ರ






ನಮೋ ಅರಿಹಂತಾಣಂ
ನಮೋ ಸಿದ್ಧಾಣಂ
ನಮೋ ಆಯರಿಯಾಣಂ
ನಮೋ ಉವಜ್ಝಾಯಾಣಂ
ನಮೋ ಲೋಯೆ ಸವ್ವಸಾಹೂಣಂ
ಏಸೋ ಪಂಚ ನಮುಕ್ಕಾರೋ;
ಸವ್ವ ಪಾವಪ್ಪಣಾಸಣೋ
ಮಂಗಲಾಣಂ ಚ ಸವ್ವೇಸಿಂ;
ಪಢಮಂ ಹವಯಿ ಮಂಗಲಂ

ಓಂ ನಮೋ ಭಗವತೇ ವಾಸುದೇವಾಯ
ಓಂ ನಮಃ ಶಿವಾಯ
ಜೈ ಸಚ್ಚಿದಾನಂದ್





# ‘ದಾದಾ ಭಗವಾನ್’ ಯಾರು?

1958ರ ಜೂನ್ ಮಾಸದ ಒಂದು ಸಂಜೆ, ಸುಮಾರು ಆರು ಗಂಟೆಯಾಗಿರಬಹುದು. ಜನಜಂಗುಳಿಯಿಂದ ತುಂಬಿಹೋಗಿದ್ದ ಸೂರತ್ ಪಟ್ಟಣದ ರೈಲ್ವೇ ನಿಲ್ದಾಣದ ಪ್ಲಾಟ್‌ಫಾರ್ಮ್ ಸಂ. 3ರ ಒಂದು ಬೆಂಚಿನ ಮೇಲೆ ಶ್ರೀ ಎ. ಎಮ್. ಪಟೇಲ್ ಎಂಬ ಹೆಸರಿನ ದೇಹರೂಪಿ ಮಂದಿರದಲ್ಲಿ, ಅಕ್ರಮ ರೂಪದಲ್ಲಿ, ಪ್ರಕೃತಿಯ ಲೀಲೆಯಂತೆ, ‘ದಾದಾ ಭಗವಾನ್’ರವರು ಸಂಪೂರ್ಣವಾಗಿ ಪ್ರಕಟರಾದರು. ಪ್ರಕೃತಿಯು ಅಧ್ಯಾತ್ಮದ ಅದ್ಭುತ ಆಶ್ಚರ್ಯವನ್ನು ಸೃಷ್ಟಿಸಿತು. ಒಂದು ಗಂಟೆಯೊಳಗೆ ಅವರಿಗೆ ವಿಶ್ವದರ್ಶನವಾಯಿತು. ‘ನಾನು ಯಾರು? ದೇವರು ಯಾರು? ಜಗತ್ತನ್ನು ನಡೆಸುವವರು ಯಾರು? ಕರ್ಮ ಎಂದರೆ ಏನು? ಮುಕ್ತಿ ಎಂದರೆ ಏನು?’ ಎಂಬ ಜಗತ್ತಿನ ಎಲ್ಲಾ ಆಧ್ಯಾತ್ಮಿಕ ಪ್ರಶ್ನೆಗಳ ಸಂಪೂರ್ಣ ರಹಸ್ಯ ಪ್ರಕಟಗೊಂಡಿತು. ಈ ರೀತಿ, ಪ್ರಕೃತಿಯು ಜಗತ್ತಿನ ಮುಂದೆ ಒಂದು ಅದ್ವಿತೀಯ ಪೂರ್ಣ ದರ್ಶನವನ್ನು ಪ್ರಸ್ತುತಪಡಿಸಿತು ಹಾಗು ಇದಕ್ಕೊಂದು ಮಾಧ್ಯಮವಾದರು, ಗುಜರಾತಿನ ಚರೋತರ್ ಪ್ರದೇಶದ ಭಾದರಣ್ ಎಂಬ ಹಳ್ಳಿಯ ಪಟೇಲರಾಗಿದ್ದ, ವೃತ್ತಿಯಲ್ಲಿ ಕಾಂಟ್ರಾಕ್ಟರಾಗಿದ್ದ, ಸಂಪೂರ್ಣವಾಗಿ ರಾಗದ್ವೇಷದಿಂದ ಮುಕ್ತರಾಗಿದ್ದವರು ಶ್ರೀ ಎ. ಎಮ್. ಪಟೇಲ್!

‘ವ್ಯಾಪಾರದಲ್ಲಿ ಧರ್ಮವಿರಬೇಕು, ಧರ್ಮದಲ್ಲಿ ವ್ಯಾಪಾರವಲ್ಲ’, ಎಂಬ ಸಿದ್ಧಾಂತದ ಪಾಲನೆ ಮಾಡುತ್ತಾ ಇವರು ಇಡೀ ಜೀವನವನ್ನು ಕಳೆದರು. ಜೀವನದಲ್ಲಿ ಅವರು ಯಾರಿಂದಲೂ ಹಣ ತೆಗೆದುಕೊಳ್ಳಲಿಲ್ಲವಷ್ಟೇ ಅಲ್ಲ, ತಮ್ಮ ಭಕ್ತರಿಗೆ ತಮ್ಮ ಸಂಪಾದನೆಯ ಹಣದಲ್ಲಿ ಯಾತ್ರೆ ಮಾಡಿಸುತ್ತಿದ್ದರು.

ಅವರು ಅನುಭವಿಗಳಾಗಿದ್ದರು. ಅದೇ ರೀತಿ, ಅವರು ಸಿದ್ಧಿಸಿಕೊಂಡ ಅದ್ಭುತವಾದ ಜ್ಞಾನಪ್ರಯೋಗದ ಮೂಲಕ ಕೇವಲ ಎರಡೇ ಗಂಟೆಗಳಲ್ಲಿ ಬೇರೆ ಮುಮುಕ್ಷುಗಳಿಗೂ ಸಹ ಆತ್ಮಜ್ಞಾನದ ಅನುಭವ ಉಂಟಾಗುವಂತೆ ಮಾಡುತ್ತಿದ್ದರು. ಇದನ್ನು ಅಕ್ರಮ ಮಾರ್ಗ ಎಂದು ಕರೆಯಲಾಯಿತು. ಅಕ್ರಮ, ಅದರರ್ಥ ಯಾವುದೇ ಕ್ರಮವಿಲ್ಲದ ಎಂದು. ಹಾಗು ಕ್ರಮ ಎಂದರೆ ಹಂತ ಹಂತವಾಗಿ, ಒಂದರ ನಂತರ ಒಂದರಂತೆ ಕ್ರಮವಾಗಿ ಮೇಲೇರುವುದು ಎಂದು. ಅಕ್ರಮ ಎಂದರೆ ಲಿಫ್ಟ್ ಮಾರ್ಗ, ಒಂದು ಶಾರ್ಟ್ ಕಟ್.

ಅವರು ತಾವೇ ಪ್ರತಿಯೊಬ್ಬರಿಗೂ ‘ದಾದಾ ಭಗವಾನ್ ಯಾರು?’ ಎಂಬುದರ ರಹಸ್ಯದ ಬಗ್ಗೆ ಹೇಳುತ್ತಾ ನುಡಿಯುತ್ತಿದ್ದರು “ನಿಮ್ಮ ಎದುರು ಕಾಣುತ್ತಿರುವವರು 'ದಾದಾ ಭಗವಾನ್' ಅಲ್ಲ. ನಾನು ಜ್ಞಾನಿ ಪುರುಷ. ನನ್ನೊಳಗೆ ಪ್ರಕಟಗೊಂಡಿರುವವರು 'ದಾದಾ ಭಗವಾನ್'. ದಾದಾ ಭಗವಾನ್ ಹದಿನಾಲ್ಕು ಲೋಕಗಳಿಗೂ ಒಡೆಯರು. ಅವರು ನಿಮ್ಮಲ್ಲೂ ಇದ್ದಾರೆ, ಎಲ್ಲರಲ್ಲೂ ಇದ್ದಾರೆ. ನಿಮ್ಮಲ್ಲಿ ಅವ್ಯಕ್ತರೂಪದಲ್ಲಿದ್ದಾರೆ ಮತ್ತು ‘ಇಲ್ಲಿ’ ನನ್ನೊಳಗೆ ಸಂಪೂರ್ಣ ರೂಪದಲ್ಲಿ ಪ್ರಕಟಗೊಂಡಿದ್ದಾರೆ. ದಾದಾ ಭಗವಾನ್‌ರವರಿಗೆ ನಾನೂ ನಮಸ್ಕಾರ

## ದಾದಾ ಭಾಗವಾನ್ ಫೌಂಡೇಶನ್ ನಿಂದ ಪ್ರಕಾಶಿತವಾದ ಕನ್ನಡ ಹಾಗೂ ಹಿಂದಿ ಪುಸ್ತಕಗಳು

### ಕನ್ನಡ ಪುಸ್ತಕಗಳು

1. ಆತ್ಮಸಾಕ್ಷಾತ್ಕಾರ
2. ಅಡ್ಜಸ್ಟ್ ಎವ್ರಿವೇರ್
3. ಸಂಘರ್ಷಣೆಯನ್ನು ತಪ್ಪಿಸಿ

### ಹಿಂದಿ ಪ್ರಸ್ತಕಗಳು

1. ಜ್ಞಾನಿ ಪುರುಷ್ ಕೀ ಪಹಚಾನ್
2. ಸರ್ವ್ ದುಃಖೋಂ ಸೇ ಮುಕ್ತಿ
3. ಕರ್ಮ್ ಕಾ ಸಿದ್ಧಾಂತ್
4. ಆತ್ಮಬೋಧ್
5. ಅಂತಃಕರಣ್ ಕಾ ಸ್ವರೂಪ್
6. ಜಗತ್ ಕರ್ತಾ ಕೌನ್?
7. ಭುಗತೇ ಉಸೀ ಕಾ ಭೂಲ್
8. ಅಡ್ಜಸ್ಟ್ ಎವೆರಿವ್ಹೇರ್
9. ಟಕರಾವ್ ಟಾಲಿಎ
10. ಹುವಾ ಸೋ ನ್ಯಾಯ್
11. ಚಿಂತಾ
12. ಕ್ರೋಧ್
13. ಮೈ ಕೌನ್ ಹೂಂ?
14. ವರ್ತಮಾನ್ ತೀರ್ಥಂಕರ್ ಸೀಮಂಧರ್ ಸ್ವಾಮಿ
15. ಮಾನವ ಧರ್ಮ
16. ಪ್ರೇಮ್
17. ಅಹಿಂಸಾ
18. ಪ್ರತಿಕ್ರಮಣ್ (ಸಂ.)
19. ಪಾಪ್–ಪುಣ್ಯ್
20. ಕರ್ಮ್ ಕಾ ವಿಜ್ಞಾನ್
21. ಚಮತ್ಕಾರ್
22. ವಾಣಿ, ವ್ಯವಹಾರ್ ಮೇ...
23. ಪೈಸೋಂಕಾ ವ್ಯವಹಾರ್
24 .ಪತಿ–ಪತ್ನಿ ಕಾ ದಿವ್ಯ ವ್ಯವ–ಹಾರ್
25. ಮಾತಾ ಪಿತಾ ಔರ್ ಬಚ್ಚೋಂಕಾ...
26. ಸಮಝ್ ಸೇ ಪ್ರಾಪ್ತ್ ಬ್ರಹ್ಮಚರ್ಯ್
27. ನಿಜದೋಷ್ ದರ್ಶನ್ ಸೇ...
28. ಕ್ಲೇಶ್ ರಹಿತ್ ಜೀವನ್
29. ಗುರು–ಶಿಷ್ಯ್
30. ಸೇವಾ–ಪರೋಪಕಾರ್
31. ತ್ರಿಮಂತ್ರ್
32. ಭಾವನಾ ಸೇ ಸುಧರೇ ಜನ್ಮೋಜನ್ಮ್
33. ದಾನ್
34. ಮೃತ್ಯು ಕೆ ರಹಸ್ಯ
35. ದಾದಾ ಭಗವಾನ್ ಕೌನ್?
36. ಸತ್ಯ–ಅಸತ್ಯ ಕೆ ರಹಸ್ಯ
37. ಆಪ್ತವಾಣಿ – 1 ರಿಂದ 9
38. ಆಪ್ತವಾಣಿ – 13 (ಭಾಗ 1 – 2)

ದಾದಾ ಭಗವಾನ್ ಫೌಂಡೇಶನ್‌ನಿಂದ ಗುಜರಾತಿ ಭಾಷೆಯಲ್ಲೂ ಹಲವಾರು ಮಸ್ತಕಗಳು ಪ್ರಕಾಶಿತವಾಗಿವೆ.
www.dadabhagwan.org ನಲ್ಲಿ ಸಹ ನೀವು ಈ ಎಲ್ಲಾ ಮಸ್ತಕಗಳನ್ನು ಪಡೆಯಬಹುದು.ದಾದಾ ಭಗವಾನ್ ಫೌಂಡೇಶನ್‌ನಿಂದ ಪ್ರತಿ ತಿಂಗಳು ಹಿಂದಿ, ಗುಜರಾತಿ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ 'ದಾದಾವಾಣಿ' ಮ್ಯಾಗಜಿನ್ ಪ್ರಕಾಶಿತವಾಗುತ್ತದೆ.

# ಸಂಪಾದಕೀಯ

ಜ್ಞಾನಿಪುರುಷರು ಮಾತ್ರ ತಮ್ಮ ಅಂತಃಕರಣದಿಂದ ಸಂಪೂರ್ಣ ಬೇರ್ಪಟ್ಟು, ಕೇವಲ ಜ್ಞಾನದಲ್ಲಿದ್ದು, ಅದರ ಯಥಾರ್ಥ ವರ್ಣನೆಯನ್ನು ಮಾಡಬಲ್ಲರು. ಜ್ಞಾನಿಪುರುಷರಾದ ಪರಮ ಪೂಜ್ಯ ದಾದಾ ಭಗವಾನ್ (ದಾದಾಶ್ರಿ) ರವರು ಅಂತಃಕರಣದ ಬಗ್ಗೆ ಬಹಳ ಸುಂದರವಾದ ಸ್ಪಷ್ಟವಾದ ವರ್ಣನೆಯನ್ನು ಮಾಡಿದ್ದಾರೆ.

ಅಂತಃಕರಣದಲ್ಲಿ ನಾಲ್ಕು ಭಾಗಗಳಿವೆ: ಮನಸ್ಸ,ಬುದ್ಧಿ,ಚಿತ್ತ ಮತ್ತು ಅಹಂಕಾರ. ಇಲ್ಲಿ ಪ್ರತಿಯೊಂದರ ಕಾರ್ಯವೂ ಬೇರೆ ಬೇರೆಯಾಗಿದೆ. ಏಕಕಾಲದಲ್ಲಿ ಈ ನಾಲ್ಕರಲ್ಲಿ ಒಂದು ಮಾತ್ರ ಕಾರ್ಯನಿರತವಾಗಿರುತ್ತದೆ.

ಮನಸ್ಸು ಎಂದರೇನು? ಮನಸ್ಸು ಗ್ರಂಥಿಗಳಿಂದ ಉಂಟಾಗಿದೆ, ಹಿಂದಿನ ಜನ್ಮದಲ್ಲಿ ಅಜ್ಞಾನದಿಂದಾಗಿ ಯಾವುದರ ಮೇಲೆಲ್ಲಾ ರಾಗ-ದ್ವೇಷ ಮಾಡಲಾಗಿತ್ತೋ, ಅವುಗಳ ಪರಮಾಣುಗಳನ್ನು ಸೆಳೆದು ಮತ್ತು ಅವುಗಳನ್ನು ಸಂಗ್ರಹಿಸಿಕೊಂಡು ಗ್ರಂಥಿಗಳು ಉಂಟಾಗುತ್ತವೆ. ಆ ಗ್ರಂಥಿಗಳು ಈ ಜನ್ಮದಲ್ಲಿ ಚಿಗುರೊಡೆಯುತ್ತವೆ. ಇವುಗಳನ್ನು ವಿಚಾರಗಳೆಂದು ಹೇಳಲಾಗುತ್ತದೆ. ಇಂತಹ ವಿಚಾರಗಳನ್ನು 'Discharge ಮನಸ್ಸು' ಎಂದು ಕರೆಯುತ್ತಾರೆ. ವಿಚಾರಗಳು ಬಂದಾಗ ಅಹಂಕಾರವು ಅದರಲ್ಲಿ ತನ್ಮಯವಾಗುತ್ತದೆ. ಅಹಂಕಾರವು ತನ್ಮಯವಾಗದೆ ಇದ್ದರೆ, ಎಲ್ಲಾ ವಿಚಾರಗಳು Discharge ಆಗಿ ಮನಸ್ಸು ಖಾಲಿಯಾಗುತ್ತದೆ, ಯಾವುದರ ಬಗ್ಗೆ ಹೆಚ್ಚಿನ ವಿಚಾರವಿರುವುದೋ, ಅದರ ಮನೋಗ್ರಂಥಿಯು ದೊಡ್ಡದಿರುತ್ತದೆ.

ಅಂತಃಕರಣದ ಇನ್ನೊಂದು ಭಾಗ 'ಚಿತ್ತ'ವಾಗಿದೆ. ಚಿತ್ತದ ಸ್ವಭಾವ ಅಲೆದಾಡುವುದು. ಮನಸ್ಸು ಎಂದೂ ಅಲೆದಾಡುವುದಿಲ್ಲ. 'ಚಿತ್ತ'ವು ಸುಖವನ್ನು ಹುಡುಕಿಕೊಂಡು ಅಲೆಯುತ್ತಲೇ ಇರುತ್ತದೆ. ಆದರೆ, ಅದೆಲ್ಲವೂ ಭೌತಿಕ ಸುಖವಾಗಿದ್ದು ವಿನಾಶವಾಗಿಲಿರುವುದರಿಂದ, ಅದರ ಹುಡುಕಾಟಕ್ಕೆ ಅಂತ್ಯ ವಿರುವುದಿಲ್ಲ. ಹಾಗಾಗಿ ಅದು ಅಲೆದಾಡುತ್ತಲೇ ಇರುತ್ತದೆ. ಯಾವಾಗ ಆತ್ಮಸುಖವು ದೊರಕುವುದೋ, ಆಗ ಅದರ ಅಲೆದಾಟವು ಅಂತ್ಯಗೊಳ್ಳುತ್ತದೆ. ಈ 'ಚಿತ್ತ'ವು ಜ್ಞಾನ-ದರ್ಶನದಿಂದ ಉತ್ಪನ್ನವಾಗುತ್ತದೆ. ಅಶುದ್ಧ ಜ್ಞಾನ ಹಾಗು ಅಶುದ್ಧ ದರ್ಶನದಿಂದ ಅಶುದ್ಧ ಚಿತ್ತವು ಉತ್ಪನ್ನವಾಗಿದೆ, ಇದು ಸಂಸಾರಿಕ ಚಿತ್ತವಾಗಿದೆ. ಮತ್ತು ಶುದ್ಧ ಜ್ಞಾನ ಹಾಗು ಶುದ್ಧ ದರ್ಶನದಿಂದ ಶುದ್ಧ ಚಿತ್ತವು ಉತ್ಪನ್ನವಾಗುತ್ತದೆ, ಇದು ಶುದ್ಧ ಆತ್ಮ!

ಬುದ್ಧಿಯು ಆತ್ಮದ Indirect Light ಆಗಿದೆ ಮತ್ತು ಪ್ರಜ್ಞೆ (ಪ್ರಜ್ಞಾ) Direct Light ಆಗಿದೆ. ಬುದ್ಧಿ

ಯಾವಾಗಲೂ ಸಂಸಾರದಲ್ಲಿನ ಲಾಭ-ನಷ್ಟದ ಬಗ್ಗೆ ತಿಳಿಸಿಕೊಡುತ್ತದೆ ಮತ್ತು ಪ್ರಜ್ಞೆ ಯಾವಾಗಲೂ ಮೋಕ್ಷದ ದಾರಿಯನ್ನೇ ತೋರಿಸುತ್ತದೆ. ಇಂದ್ರಿಯಗಳ ಮೇಲೆ ಮನಸ್ಸು, ಮನಸ್ಸಿನ ಮೇಲೆ ಬುದ್ಧಿ, ಬುದ್ಧಿಯ ಮೇಲೆ ಅಹಂಕಾರ ಹಾಗು ಇದೆಲ್ಲದರ ಮೇಲೆ ಆತ್ಮವಿರುವುದು. ಬುದ್ಧಿಯು, ಮನಸ್ಸು ಅಥವಾ ಚಿತ್ತ ಇವೆರಡರಲ್ಲಿ ಒಂದನ್ನು ಆಲಿಸಿ ನಿರ್ಣಯ ತೆಗೆದುಕೊಳ್ಳುತ್ತದೆ ಮತ್ತು ಅಹಂಕಾರವು ಅಂಧನಂತೆ ಬುದ್ಧಿಯ ಹೇಳಿಕೆಯ ಅನುಸಾರವಾಗಿ ಅದರ ಮೇಲೆ ತನ್ನ ಹಸ್ತಾಕ್ಷರವನ್ನು ಹಾಕುತ್ತದೆ. ಅಹಂಕಾರದ ಹಸ್ತಾಕ್ಷರವಾಗುತ್ತಿದ್ದಂತೆ ಆ ಕಾರ್ಯವು ಬಾಹ್ಯದಲ್ಲಿ ಪ್ರಾರಂಭವಾಗುತ್ತದೆ. ಇದರಿಂದಾಗಿ ಅಹಂಕಾರವು ಕರ್ತ-ಭೋಕ್ತನಾಗುತ್ತದೆ. ಅಹಂಕಾರವು ಸ್ವತಃ ಏನು ಮಾಡುವುದಿಲ್ಲ ಆದರೂ ನಾನು ಮಾಡಿದೆನೆಂದು ಅಂದುಕೊಳ್ಳುತ್ತದೆ. ಹಾಗೆ ಅಂದುಕೊಂಡ ಕ್ಷಣದಿಂದ ಕರ್ತನಾಗಿ ನಂತರ ಅದುವೇ ಭೋಕ್ತನಾಗಿ ಅನುಭವಿಸಬೇಕಾಗುತ್ತದೆ. ಸಂಯೋಗದಿಂದ ಕಾರ್ಯವಾಗುವುದು, ತನ್ನಿಂದಲ್ಲ ಎಂಬ ಜ್ಞಾನದ ಅರಿವಾದ ಕೂಡಲೇ ಅಕರ್ತನಾಗುತ್ತದೆ. ನಂತರ ಅದಕ್ಕೆ ಕರ್ಮದ charge ಆಗುವುದಿಲ್ಲ. ಅಂತಃಕರಣದ ಎಲ್ಲಾ ಕ್ರಿಯೆಯು ಯಾಂತ್ರಿಕವಾಗಿದೆ (mechanical). ಇದರಲ್ಲಿ ಆತ್ಮಕ್ಕೆ ಮಾಡಬೇಕಾದುದು ಏನೂ ಇಲ್ಲ. ಆತ್ಮವು ಕೇವಲ ಜ್ಞಾತಾ-ದೃಷ್ಟಾ ಹಾಗು ಪರಮಾನಂದವೇ ಆಗಿದೆ.

-ಡಾ. ನಿರುಬೇನ್ ಅಮೀನ್

# ಅಂತಃಕರಣದ ಸ್ವರೂಪ

## ಜ್ಞಾನಿಪುರುಷರು, ವಿಶ್ವದ ಒಬ್ಸರ್ವೇಟರಿ

'ಜ್ಞಾನಿಪುರುಷರು' ಇಡೀ ವಿಶ್ವದ 'ಒಬ್ಸರ್ವೇಟರಿ' ಎಂದು ಕರೆಯಲ್ಪಡುತ್ತಾರೆ. ಬ್ರಹ್ಮಾಂಡದಲ್ಲಿ ಏನು ನಡೆಯುತ್ತಿದೆ, ಅದೆಲ್ಲವನ್ನು ಜ್ಞಾನಿಪುರುಷರು ತಿಳಿದಿರುತ್ತಾರೆ. ವೇದಕ್ಕಿಂತಲೂ ಮಿಗಿಲಾದ ವಿಚಾರಗಳನ್ನು ಜ್ಞಾನಿಪುರುಷರು ಹೇಳಬಲ್ಲರು.

ನೀವು ಏನು ಬೇಕಾದರೂ ಕೇಳಿ, ಅದು ನಮಗೆ ತಪ್ಪೆಂದು ಅನ್ನಿಸುವುದಿಲ್ಲ. ಇಡೀ ವಿಶ್ವದ ವಿಜ್ಞಾನಿಗಳು ಏನು ಕೇಳುತ್ತಾರೋ ಆ ಎಲ್ಲಾ ಜ್ಞಾನವನ್ನು ಕೊಡಲು ಸಿದ್ಧರಿದ್ದೇವೆ; ಈ ಮನಸ್ಸು ಎಂದರೆ ಏನು? ಎಲ್ಲಿಂದ ಇದರ ಜನ್ಮ ಉಂಟಾಗಿದೆ, ಹೇಗೆ ಇದರ ಅಂತ್ಯವಾಗುತ್ತದೆ? ಹೀಗೆ ಮನಸ್ಸಿನ, ಬುದ್ಧಿಯ, ಚಿತ್ತದ, ಅಹಂಕಾರದ, ಪ್ರತಿಯೊಂದು ವಸ್ತುವಿನ ಎಲ್ಲಾ ವಿಜ್ಞಾನವನ್ನು ಜಗತ್ತಿಗೆ ಕೊಡಲು ನಾವು ಬಂದಿದ್ದೇವೆ. ಮನಸ್ಸು ಎಂದರೆ ಏನು, ಬುದ್ಧಿ ಎಂದರೆ ಏನು, ಚಿತ್ತ ಎಂದರೆ ಏನು, ಅಹಂಕಾರ ಎಂದರೆ ಏನು? ಇವೆಲ್ಲವನ್ನು ತಿಳಿದುಕೊಳ್ಳಬೇಕು.

**ಪ್ರಶ್ನಕರ್ತ:** ಯಾರಿಗೆಲ್ಲ ಮನಸ್ಸು ಎಂಬುದು ಇದೆಯೋ, ಅವರನ್ನು ಮನುಷ್ಯರೆಂದು ಕರೆಯುತ್ತಾರೆ ಅಲ್ಲವೇ?

**ದಾದಾಶ್ರೀ:** ಹೌದು, ಅದು ಸರಿ. ಈ ಪ್ರಾಣಿಗಳಿಗೂ ಮನಸ್ಸು ಇದೆ, ಆದರೆ ಅವುಗಳ ಮನಸ್ಸು Limited (ಸೀಮಿತವಾಗಿದೆ) ಹಾಗು ಮನುಷ್ಯನದ್ದು Unlimited (ಅಸೀಮಿತ) ಮನಸ್ಸು. ತಾನು ಸ್ವತಃ ಭಗವಂತನಾಗಬಹುದಾದ ಮನಸ್ಸು, ಅವನಲ್ಲಿದೆ.

## ಮನೋಗ್ರಂಥಿಗಳಿಂದ ಮುಕ್ತಿ ಹೇಗೆ?

**ಪ್ರಶ್ನಕರ್ತ:** ಮನಸ್ಸು ಇರುವುದರಿಂದವೇ ಬಹಳ ತೊಂದರೆ.

**ದಾದಾಶ್ರೀ:** ಇಲ್ಲ, ಈ ಮನಸ್ಸು ಬಹಳ ಉಪಕಾರವನ್ನು ಮಾಡುತ್ತದೆ. ಅದು ಮೋಕ್ಷಕ್ಕೆ ಕರೆದುಕೊಂಡು ಹೋಗುತ್ತದೆ.

**ಪ್ರಶ್ನಕರ್ತ:** ಮನಸ್ಸು ಎಂದರೆ ಏನು?

**ದಾದಾಶ್ರೀ:** ಮನಸ್ಸು ಅನೇಕ ಗ್ರಂಥಿಗಳಿಂದ ಉಂಟಾಗಿದೆ.

ಈ ಬೇಸಿಗೆಯ ಕಾಲದಲ್ಲಿ ನೀವು ಗದ್ದೆಗೆ ಹೋದರೆ, ಆಗ ಗದ್ದೆಯ ಬದಿಯ 'ಬದು'ವನ್ನು ನೋಡಿ ನೀವು ಹೇಳುತ್ತೀರಾ, 'ನಮ್ಮ ಬದುವಿನ ಮೇಲೆ ಯಾವ ಕಳೆಯು ಬೆಳೆಯದೆ ಬಹಳ ಸ್ವಚ್ಛವಾಗಿದೆ' ಎಂದು. ಅದಕ್ಕೆ ನಾವು, 'ಜೂನ್ ತಿಂಗಳ ಹದಿನೈದನೇ ತಾರೀಖಿನ ನಂತರ ಮಳೆಯಾದ ಮೇಲೆ ನಿಮಗೆ ತಿಳಿಯುತ್ತದೆ,' ಎಂದು ಹೇಳುತ್ತೇವೆ. ಮಳೆಯಾದ ಮೇಲೆ ನೀವೇ ಹೇಳುತ್ತೀರಾ, ಎಷ್ಟೊಂದು ಗಿಡಬಳ್ಳಿಗಳು ಚಿಗುರೊಡೆದಿವೆ ಎಂದು. ಅದಕ್ಕೆ ಕಾರಣವೇನೆಂದರೆ ಯಾವೆಲ್ಲ ಗಿಡಗಳು ಮೇಲೆ ಬಂದಿರುವುವೋ, ಅದು ಅವುಗಳ ಗ್ರಂಥಿಯಿಂದಾಗಿ; ಭೂಮಿಯೊಳಗೆ ಯಾವುದೆಲ್ಲಾ ಗಿಡಗಳ ಬೇರುಗಳು ಹುದುಗಿಕೊಂಡಿವೆಯೋ, ಅವುಗಳಿಗೆ ನೀರಿನ ಸಂಯೋಗವು ಸಿಗುತ್ತಿದಂತೆಯೇ ಚಿಗುರೊಡೆಯುತ್ತವೆ. ಹಾಗೆಯೇ ಈ ಮನುಷ್ಯನ ಮನಸ್ಸು ಕೂಡಾ ಗ್ರಂಥಿಯ ಸ್ವರೂಪದಲ್ಲಿ ಇರುತ್ತದೆ. ವಿಷಯದ ಗ್ರಂಥಿ, ಲೋಭದ ಗ್ರಂಥಿ, ಮಾಂಸಾಹಾರದ ಗ್ರಂಥಿ, ಹೀಗೆ ಎಲ್ಲಾ ವಿಧದ ಗ್ರಂಥಿಗಳು ಇರುತ್ತವೆ. ಆದರೆ, ಅವುಗಳಿಗೆ ಸರಿಯಾದ ಸಮಯ ಬಾರದೆ ಇದ್ದರೆ, ಸಂಯೋಗವು ಸಿಗದೇ ಹೋದರೆ ಅವುಗಳು ಚಿಗುರುವುದಿಲ್ಲ. ಅದರ ಸಮಯ ಬಂದಾಗ, ಸಂಯೋಗವು ಅನುಕೂಲಕರವಾದಾಗ, ಗ್ರಂಥಿಯಿಂದ ವಿಚಾರಗಳು ಹೊರಹೊಮ್ಮುತ್ತವೆ. ಸ್ತ್ರೀಯನ್ನು ಕಂಡಾಕ್ಷಣವೇ ಹಲವಾರು ವಿಚಾರಗಳು ಬರುತ್ತವೆ, ಆದರೆ ಅಂತಹ ಸಂದರ್ಭವು ಕಾಣಲು ಸಿಗದೆ ಇದ್ದಾಗ ಯಾವುದೇ ವಿಚಾರಗಳು ಇರುವುದಿಲ್ಲ, ತೊಂದರೆಯು ಇರುವುದಿಲ್ಲ.

ನಿಮಗೆ ಯಾವ ವಿಚಾರವು ಬರುತ್ತದೆಯೋ, ಅದೇ ವಿಚಾರವು ಬೇರೆಯವರಿಗೆ ಬರುವುದಿಲ್ಲ. ಏಕೆಂದರೆ ಪ್ರತಿಯೊಬ್ಬ ಮನುಷ್ಯನಲ್ಲಿ ಗ್ರಂಥಿಗಳು ವಿಧವಿಧವಾಗಿರುತ್ತವೆ. ಕೆಲವರಿಗೆ ಮಾಂಸಾಹಾರದ ಗ್ರಂಥಿಯೇ ಇರುವುದಿಲ್ಲ, ಅಂಥವರಿಗೆ ಅದರ ವಿಚಾರವೇ ಬರುವುದಿಲ್ಲ.

ಒಂದೇ ಕಾಲೇಜಿನಲ್ಲಿನ ಮೂರು ವಿದ್ಯಾರ್ಥಿಗಳು. ಅವರಲ್ಲಿ ಒಬ್ಬ ಜೈನ, ಒಬ್ಬ ಮುಸ್ಲಿಂ ಹಾಗು ಒಬ್ಬ ವೈಷ್ಣವ. ಈ ಮೂವರು ಒಳ್ಳೆಯ ಗೆಳೆಯರು. ಅವರಲ್ಲಿ ಜೈನ ಹುಡುಗನಿಗೆ ಮಾಂಸಾಹಾರವನ್ನು ಸೇವಿಸಬೇಕೆಂಬ ವಿಚಾರವು ಎಂದೂ ಬರುವುದೇ ಇಲ್ಲ. ಅವನು, 'ಅದು ನನಗೆ ಇಷ್ಟವಿಲ್ಲ ಹಾಗು ಅದರ ಬಗ್ಗೆ ಕುತೂಹಲವೂ ಇಲ್ಲ' ಎಂದು ಹೇಳುತ್ತಾನೆ. ಹಾಗೆ ಮತ್ತೊಬ್ಬ ವೈಷ್ಣವ ಹುಡುಗ ಏನು ಹೇಳುತ್ತಾನೆ, 'ನನಗೆ ಒಮ್ಮೊಮ್ಮೆ ಮಾಂಸಾಹಾರವನ್ನು ಸೇವಿಸಬೇಕೆಂಬ ವಿಚಾರವು ಬರುತ್ತದೆ. ಆದರೆ ನಾನು ಎಂದೂ ಸೇವಿಸಿಲ್ಲ' ಎಂದು. ಇನ್ನು ಮುಸ್ಲಿಂ ಹುಡುಗ ಹೇಳುತ್ತಾನೆ, 'ನನಗೆ ಮಾಂಸಾಹಾರ ಬಹಳ ಇಷ್ಟ, ಅದು ನಮ್ಮ ದಿನ ನಿತ್ಯದ ಆಹಾರವಾಗಿದೆ' ಎಂದು.

ಇದರ ಕಾರಣವೇನು? ಮುಸ್ಲಿಂ ಹುಡುಗನಿಗೆ ಮಾಂಸಾಹಾರದ ವಿಚಾರವು ಹೆಚ್ಚಿನ ಪ್ರಮಾಣದಲ್ಲಿ ಇರುತ್ತದೆ, ವೈಷ್ಣವನಿಗೆ ಅದರ ಬಗ್ಗೆ ಯಾವಾಗಲೋ ಒಮ್ಮೆ ವಿಚಾರ ಬರುತ್ತದೆ. ಹಾಗು ಜೈನ ಹುಡುಗನಿಗೆ ಎಂದೂ ಅದರ ಬಗ್ಗೆ ವಿಚಾರವೇ ಬರುವುದಿಲ್ಲ. ಈ ಜೈನ ಹುಡುಗನೊಳಗೆ ಮಾಂಸಾಹಾರದ ಗ್ರಂಥಿಯೇ ಇರುವುದಿಲ್ಲ. ವೈಷ್ಣವನಿಗೆ ಅದರ ಬಗ್ಗೆ ಬಹಳ ಸಣ್ಣ ಗ್ರಂಥಿಯು ಇರುವುದಾಗಿದೆ. ಹಾಗೆ, ಮುಸ್ಲಿಂ ಹುಡುಗನಿಗೆ ಅದರ ಗ್ರಂಥಿಯು ದೊಡ್ಡದಿದೆ. ಯಾವ ಗ್ರಂಥಿ ಇರುವುದೋ, ಅದರ ವಿಚಾರವು ಬರುವುದಲ್ಲದೆ, ಬೇರೆ ಯಾವ ವಿಚಾರವು ಬರುವುದಿಲ್ಲ. ಹೀಗೆ ಹಲವಾರು ರೀತಿಯ ವಿಚಾರಗಳಿರುತ್ತವೆ, ಆದರೆ ನಿಮ್ಮೊಳಗೆ ಎಷ್ಟೆಲ್ಲಾ ಗ್ರಂಥಿಗಳಿವೆಯೋ, ಅವುಗಳದ್ದಷ್ಟೇ ವಿಚಾರಗಳು ಬರುತ್ತವೆ.

ಗ್ರಂಥಿ ಹೇಗೆ ಹುಟ್ಟುತ್ತದೆ? ಈ ಜನ್ಮದಲ್ಲಿ ನೀವು ಮಾಂಸಾಹಾರ ಮಾಡದೆ ಇದ್ದರೂ, ನಿಮ್ಮ ಗೆಳೆಯರ ಸಂಗದಲ್ಲಿ ಯಾರಾದರೂ ಮಾಂಸಾಹಾರ ಮಾಡುತ್ತಿದ್ದು, ಮಾಂಸಾಹಾರವು ರುಚಿಕರ ಒಳ್ಳೆ ಮಜಾ ಇದೆ ಎಂದಾಗ, ಇದರಿಂದ ನಿಮ್ಮೊಳಗೆ ಅದೇ ಅಭಿಪ್ರಾಯವು ಮೂಡುತ್ತದೆ. ಏನೆಂದರೆ, ಹೌದು ಅವನ ಮಾತು ನಿಜ ಎಂದು ಅರಿತು ನಂತರ ನೀವೂ ಕೂಡ ಮನಸ್ಸಿನಲ್ಲಿ ಭಾವನೆಯನ್ನು ಮಾಡುವಿರಿ, ಮಾಂಸಾಹಾರ ಸೇವಿಸುವುದರಿಂದ ಏನೂ ತಪ್ಪಿಲ್ಲ ಎಂದು. ಆಗ ಅದರ ಗ್ರಂಥಿಯು ಉತ್ಪನ್ನವಾಗುತ್ತದೆ. ನಂತರ ಆ ಗ್ರಂಥಿಯು ಮನಸ್ಸಿನಲ್ಲಿ ಉಳಿಯುತ್ತದೆ ಹಾಗೂ ಮುಂದಿನ ಜನ್ಮದಲ್ಲಿ ನೀವು ಮಾಂಸಾಹಾರವನ್ನು ಸೇವಿಸಲಾರಂಭಿಸುತ್ತೀರಿ.

ನಿಮಗೆ ಅರ್ಥವಾಗುತ್ತಿದೆಯೇ? ಆದುದರಿಂದ ಎಂದಿಗೂ ಅಂತಹ ಸಂಗವನ್ನಾಗಲಿ, ಭಾವನೆಯನ್ನಾಗಲಿ ಮಾಡಬೇಡಿ. ಶಾಖಾಹಾರಿಗಳೊಂದಿಗೆ ಸ್ನೇಹವನ್ನು ಬೆಳೆಸಿಕೊಳ್ಳಬೇಕು. ಏಕೆಂದರೆ, ಗ್ರಂಥಿಯನ್ನು ನಾವೇ ಹುಟ್ಟುಹಾಕುವುದು. ಮನಸ್ಸನ್ನು ಯಾವ ಭಗವಂತನೂ ಹುಟ್ಟಿಸಿಲ್ಲ. ಮನಸ್ಸನ್ನು ನಾವೇ ಸೃಷ್ಟಿಸಿರುವುದು.

ಈಗಿರುವ ಮನಸ್ಸು Discharge ಸ್ವರೂಪದ್ದಾಗಿದೆ. ಯಾವುದನ್ನು Charge ಮಾಡಲಾಗಿತ್ತೋ, ಅದೇ ಈಗ Discharge ಆಗುತಲಿರುತ್ತದೆ. Discharge ಸಮಯದಲ್ಲಿನ ವಿಚಾರವು ಹೇಗೆ ಬೇಕಾದರೂ ಇರಲಿ, ಆದರೆ, ಯಾವ ತರಹದ ಭಾವನೆಯಿಂದ charge ಮಾಡಿಕೊಳ್ಳಲಾಗುತ್ತದೆಯೋ, ಅದೇ ರೀತಿಯ ಭಾವನೆಯಿಂದ Discharge ಆಗುತ್ತದೆ. ಅದಲ್ಲದೆ ಬೇರೇನೂ ಇಲ್ಲ.

'ಜ್ಞಾನಿಪುರುಷ'ರನ್ನು ನಿರ್ಗ್ರಂಥಿಯವರೆಂದು ಹೇಳಲಾಗುತ್ತದೆ. ನಿರ್ಗ್ರಂಥಿಯ ಅರ್ಥವೇನೆಂದರೆ, ನಮ್ಮ (ಜ್ಞಾನಿಗಳ) ಮನಸ್ಸು ಒಂದು ಸೆಕೆಂಡು ಕೂಡಾ ಯಾವುದೇ ವಿಚಾರದಲ್ಲಿ ಸಿಕ್ಕಿಬೀಳುವುದಿಲ್ಲ. ನಿಮ್ಮ ಮನಸ್ಸು ಹೇಗಿರುತ್ತದೆ? ಕಾಲು-ಕಾಲು ಗಂಟೆ, ಅರ್ಧ-ಅರ್ಧ ಗಂಟೆ, ಒಂದೇ ವಿಚಾರದಲ್ಲಿ ಮುಳುಗಿರುತ್ತದೆ. ಹೇಗೆ ನೊಣವು ಬೆಲ್ಲದ ಸುತ್ತಾ ಸುತ್ತುತಲಿರುತ್ತದೆಯೋ, ಹಾಗೆ ನಿಮ್ಮ ಮನಸ್ಸು ಅಲ್ಲಿಯೇ ತಿರುಗುತಲಿರುತ್ತದೆ, ಏಕೆಂದರೆ ನಿಮ್ಮ ಮನಸ್ಸು ಗ್ರಂಥಿಗಳಿಂದ ಕೂಡಿದೆ. ಆದರೆ ನಮ್ಮ ಮನಸ್ಸು ಹಾಗಿಲ್ಲ. ಆ ಮನಸ್ಸು ಚಲನಚಿತ್ರದ (ಫಿಲಂ) ಹಾಗೆ ಒಂದರ ನಂತರ ಒಂದು ವಿಚಾರಗಳು ಬರುತಲಿರುತ್ತದೆ.ಆದರೆ, ಎಲ್ಲಿಯೂ ತನ್ಮಯಾಕಾರವಾಗುವುದಿಲ್ಲ. ಹಾಗು ನಾವು ಅದನ್ನು ವೀಕ್ಷಕರಂತೆ ವೀಕ್ಷಿಸುತ್ತೇವೆ.

ಒಬ್ಬರು ಪಟ್ಟಣವಾಸಿ ವ್ಯಕ್ತಿ ನಮ್ಮಲ್ಲಿಗೆ ದರ್ಶನ ಮಾಡಲು ಬರುತ್ತಿದ್ದರು. ಅವರು ಬಹಳ ಜಿಪುಣರು ಹಾಗು ಇಳಿವಯಸ್ಸಿನವರು. ಅವರಿಗೆ ನಾನು ಹೇಳಿದೆ, 'ಪ್ರತಿದಿನ ನೀವು ತುಂಬಾ ಆಯಾಸ ಮಾಡಿಕೊಂಡು ನಡೆದುಕೊಂಡು ಬರುತ್ತೀರಾ, ಯಾಕೆ ನೀವು ಆಟೋ ರಿಕ್ಷಾದಲ್ಲಿ ಬರಬಾರದು? ಹಾಗು ನಿಮ್ಮಲ್ಲಿ ಇರುವ ಹಣವನ್ನು ಏನು ಮಾಡುತ್ತೀರಾ? ಮಗನು ಕೂಡ ದುಡಿಯುತ್ತಿದ್ದಾನೆ.' ಆಗ ಅವರು, 'ಏನು ಮಾಡುವುದು, ನನ್ನ ಸ್ವಭಾವವೇ ಜಿಪುಣತನದ್ದಾಗಿದೆ. ಎಲ್ಲಾ ಜನರು ಊಟಮಾಡಲು ಕುಳಿತಿರುವಾಗ, ನಾನು ಲಾಡು ಬಡಿಸಲು ಹೋದರೆ ಅಲ್ಲಿಯೂ ಎಲ್ಲರಿಗೆ ಅರ್ಧ-ಅರ್ಧ ಮಾಡಿ ಬಡಿಸುತ್ತೇನೆ. ಅದೇನು ನಮ್ಮ ಮನೆಯ ಲಾಡು ಅಲ್ಲ, ಆದರೂ ಮುರಿದು ಅರ್ಧ-ಅರ್ಧ ಬಡಿಸುತ್ತೇನೆ. ನನ್ನ ಸ್ವಭಾವವೇ ಹಾಗೆ' ಎಂದು ಹೇಳಿದರು. ಅದಕ್ಕೆ ನಾನು ಕೇಳಿದೆ, 'ಜಿಪುಣತನದಿಂದ ನಿಮಗೆ ಬಹಳ ದುಃಖವಾಗಿರಬಹುದು ಅಲ್ಲವೇ? ಇದು ಲೋಭದ ಗ್ರಂಥಿಯಾಗಿದೆ.' ಅದನ್ನು ಮುರಿಯುವ ಉಪಾಯವಿದೆ. ಏನೆಂದರೆ, 'ಹದಿನೈದು-ಇಪ್ಪತ್ತು ರೂಪಾಯಿಯ ಚಿಲ್ಲರೆ ಕೈಯಲ್ಲಿ ಇಟ್ಟುಕೊಳ್ಳಿ ಮತ್ತು ಇಲ್ಲಿಗೆ ಆಟೋ ರಿಕ್ಷಾದಲ್ಲಿ ಬನ್ನಿ. ಹಾಗೆ ಬರುವಾಗ ದಾರಿಯುದ್ದಕ್ಕೂ ಸ್ವಲ್ಪ-ಸ್ವಲ್ಪ ಚಿಲ್ಲರೆಯನ್ನು ಎಸೆಯುತ್ತಾ ಬನ್ನಿ.' ಎಂದು ಅವರಿಗೆ ಹೇಳಿಕೊಟ್ಟೆ. ಅವರು ಒಂದು ದಿನ ಹಾಗೆಯೇ ಮಾಡಿದರು. ಇದರಿಂದ ಅವರ ಸ್ವಭಾವದಿಂದ ಹೊರಬರಲು ಸಹಾಯವಾಯಿತಲ್ಲದೆ, ಬಹಳ ಆನಂದವೂ ಉಂಟಾಯಿತು. ಅಂತಹ ಆನಂದದ ದಾರಿಯನ್ನು ನಾನು ಹೇಳಿಕೊಟ್ಟೆವು. ಹಣವನ್ನು ದಾರಿಯಲ್ಲಿ ಎಸೆಯುವುದರಿಂದ ಅದೇನು ನದಿಯನ್ನು ಸೇರುವುದೇ? ಇಲ್ಲ, ರಸ್ತೆಯಲ್ಲಿ ಬಿದ್ದ ಹಣವು ಅಲ್ಲಿಯೇ ಬಿದ್ದಿರುವುದಿಲ್ಲ, ಆ ಹಣವನ್ನು ಯಾರಾದರು ತೆಗೆದುಕೊಳ್ಳುತ್ತಾರೆ. ಹೀಗೆ ಮಾಡುವುದರಿಂದ ನಿಮಗೆ ಏನು ಲಾಭವಾಗುವುದೆಂದರೆ, ನಿಮ್ಮ ಮನಸ್ಸಿಗೆ ತಿಳಿಯುತ್ತದೆ, ಇನ್ನು ನನ್ನಂತೆ (ಮನಸ್ಸಿನಂತೆ) ಏನು ನಡೆಯುವುದಿಲ್ಲ ಎಂದು. ಆಗ ನಿಮ್ಮ ಲೋಭದ ಗ್ರಂಥಿಯು ಮುರಿದು ಬೀಳುತ್ತದೆ. ಹೀಗೆ ಹದಿನೈದು-ಇಪ್ಪತ್ತು ದಿನಗಳವರೆಗೆ ಹಣವನ್ನು ರಸ್ತೆಯಲ್ಲಿ ಉದುರಿಸುತ್ತಿದ್ದರೆ

ಮನಸ್ಸು ಮತ್ತೆ ಎಂದೂ ಅಡ್ಡಿಪಡಿಸಲು ಬರುವುದಿಲ್ಲ ಮತ್ತು ಮನಸ್ಸಿಗೆ ತಿಳಿಯುತ್ತದೆ ಇನ್ನು ತನ್ನಂತೆ ಏನೂ ನಡೆಯುವುದಿಲ್ಲ ಎಂದು, ನಂತರ ಮನಸ್ಸು ವಿಶಾಲವಾಗುತ್ತದೆ. ಎಷ್ಟು ಅವತಾರಗಳಿಂದ ನಿಮ್ಮ ಮನಸ್ಸು ಇದೆ?

**ಪ್ರಶ್ನಕರ್ತ:** ಗೊತ್ತಿಲ್ಲ. ಈ ಮನಸ್ಸು ಹೇಗೆ ಹುಟ್ಟುತ್ತದೆ?

**ದಾದಾಶ್ರೀ:** ಇಡೀ ಪ್ರಪಂಚವೇ ಈ ಮನಸ್ಸಿನಿಂದಾಗಿ ತಳಮಳಗೊಂಡಿದೆ. ಮನಸ್ಸು ಏನು ಎಂಬುದನ್ನು ತಿಳಿದುಕೊಳ್ಳಬೇಕು. ಮನಸ್ಸು ಬೇರೆ ಯಾವ ವಸ್ತುವಲ್ಲ, ಅದು ಹಿಂದಿನ ಜನ್ಮದ Opinion (ಅಭಿಪ್ರಾಯ) ಆಗಿದೆ. ಹಿಂದಿನ ಒಂದು ಜನ್ಮದ ಅಭಿಪ್ರಾಯವಾಗಿದೆ. ಈಗಿನ ನಿಮ್ಮ ಅಭಿಪ್ರಾಯವು, ಅದು ಈಗಿನ ಜ್ಞಾನದಿಂದಾಗಿದೆ. ಈಗ ನೀವು ಯಾವ ಜ್ಞಾನವನ್ನು ಕೇಳಿರುತಿರೋ, ಯಾವ ಜ್ಞಾನವನ್ನು ಓದಿರುತ್ತೀರೋ, ಅದರಿಂದ ಈಗಿನ ಅಭಿಪ್ರಾಯಗಳು ಉಂಟಾಗುತ್ತವೆ. ಅದೇ ರೀತಿ ಹಿಂದಿನ ಜನ್ಮದಲ್ಲಿ ಯಾವ ಜ್ಞಾನವಿತ್ತೋ ಅದರಂತೆ ಅಭಿಪ್ರಾಯಗಳಿರುತ್ತವೆ. ಆಗಿನ ಆ ಎಲ್ಲಾ ಅಭಿಪ್ರಾಯಗಳನ್ನು ಈಗಿರುವ ಮನಸ್ಸು ಹೇಳುತ್ತದೆ. ಇದರಿಂದಾಗಿ ಎರಡು ಅಭಿಪ್ರಾಯಗಳ ನಡುವೆ ಘರ್ಷಣೆ ನಡೆಯುತ್ತಲೇ ಇರುತ್ತದೆ. ಹೀಗೆ ಜಗತ್ತಿನಲ್ಲಿ ಎಲ್ಲರೂ ಮನಸ್ಸಿನ ಅಧೀನಕ್ಕೆ ಒಳಗಾಗಿ, ಬಹಳ ದುಃಖಿಗಳಾಗಿದ್ದಾರೆ.

ಒಬ್ಬ ವ್ಯಕ್ತಿಯ ಹೆಂಡತಿ ಪ್ರತಿನಿತ್ಯ ಅವರೊಂದಿಗೆ ಜಗಳವಾಡುತ್ತಿದ್ದಳು. ಏಕೆಂದರೆ, ಅವಳ ಗೆಳತಿಯರೆಲ್ಲರೂ ದೊಡ್ಡ ದೊಡ್ಡ ಬಂಗಲೆಗಳನ್ನು ಕಟ್ಟಿಕೊಂಡಿದ್ದಾರೆ ಹಾಗೂ ನೀವು ಇಷ್ಟು ದೊಡ್ಡ Officer (ಅಧಿಕಾರಿ) ಆಗಿ ಏನೂ ಮಾಡಲಿಲ್ಲ. ನೀವು ಯಾಕೆ ಲಂಚವನ್ನು ತೆಗೆದು ಕೊಳ್ಳುವುದಿಲ್ಲ? ನೀವೂ ಕೂಡಾ ಬೇರೆಯವರ ಹಾಗೆ ಲಂಚವನ್ನು ಪಡೆಯಬೇಕು. ಹೀಗೆ, ಅವಳು ಪ್ರತಿನಿತ್ಯ ಹೇಳುತ್ತಿದ್ದಳು, ಇದರಿಂದಾಗಿ ಅವರಿಗೂ, ಲಂಚವನ್ನು ತೆಗೆದುಕೊಳ್ಳಲೇಬೇಕೆಂದು ಅನ್ನಿಸಿತು ಹಾಗೂ ಕಚೇರಿಗೆ ಹೊರಡುವಾಗ ಲಂಚವನ್ನು ತೆಗೆದುಕೊಳ್ಳುವ ಮನಸ್ಸು ಮಾಡಿ ಹೊರಡುತ್ತಿದ್ದರು. ಆದರೆ, ಲಂಚ ತೆಗೆದುಕೊಳ್ಳುವ ಸಮಯ ಬಂದಾಗ ಹಿಂಜರಿಯುತ್ತಿದ್ದರು. ಏಕೆಂದರೆ ಅವರ ಹಿಂದಿನ ಅಭಿಪ್ರಾಯವು ತೆಗೆದುಕೊಳ್ಳಲು ಬಿಡುವುದಿಲ್ಲ, ಆದರೆ ಈಗಿರುವ ಅಭಿಪ್ರಾಯವು 'ಲಂಚ ತೆಗೆದುಕೊಳ್ಳಲೇಬೇಕು, ಲಂಚ ತೆಗೆದುಕೊಳ್ಳುವುದೇ ಸರಿ' ಎಂದು ಹೇಳುತ್ತದೆ. ಹೀಗಾಗಿ ಮುಂದಿನ ಜನ್ಮದಲ್ಲಿ ಅವರು ಲಂಚ ತೆಗೆದುಕೊಳ್ಳಬೇಕಾಗಿ ಬರುತ್ತದೆ. ಹಾಗೆಯೇ, ಇನ್ನೊಬ್ಬ ವ್ಯಕ್ತಿಯು ಲಂಚ ತೆಗೆದುಕೊಳ್ಳುತ್ತಿರುತ್ತಾರೆ, ಆದರೆ ಅದರಿಂದಾಗಿ ಅವರಿಗೆ ಬಹಳ ದುಃಖವಾಗುತಿರುತ್ತದೆ ಹಾಗೂ 'ಲಂಚ ತೆಗೆದುಕೊಳ್ಳುವುದೇ ಬೇಡ, ಅದು ಒಳ್ಳೆಯದಲ್ಲ, ಆದರೂ ಯಾಕೆ ಹೀಗೆ ತೆಗೆದುಕೊಳ್ಳುತ್ತಿದ್ದೇನೆ?' ಎಂದು ಅನ್ನಿಸುತ್ತದೆ. ಅಂತಹವರು ಮುಂದಿನ

ಜನ್ಮದಲ್ಲಿ ಲಂಚವನ್ನು ಸ್ವೀಕರಿಸಲು ನಿರಾಕರಿಸುತ್ತಾರೆ. ಅಂದರೆ, ಇಲ್ಲಿ ಯಾರು ಲಂಚವನ್ನು ತೆಗೆದುಕೊಂಡಿದ್ದಾರೋ, ಅವರು ಊರ್ಧ್ವಗತಿಯಲ್ಲಿ ಸಾಗುತ್ತಾರೆ ಹಾಗೂ ಯಾರು ಈಗ ಲಂಚ ತೆಗೆದುಕೊಳ್ಳದೆ ಇದ್ದಾರೋ, ಅವರು ಅಧೋಗತಿಗೆ ಹೋಗುತ್ತಾರೆ. ಇದೆಲ್ಲವೂ ಅವರವರ ಅಭಿಪ್ರಾಯದ ಅನುಸಾರವಾಗಿದೆ.

## ಮನಸ್ಸಿನ ತಂದೆ,ತಾಯಿ ಯಾರು?

**ಪ್ರಶ್ನಕರ್ತ:** ಅಭಿಪ್ರಾಯವೇ ಎಲ್ಲದರ ಮೂಲವಾಗಿದೆ ಅಲ್ಲವೇ?

**ದಾದಾಶ್ರೀ:** ಹೌದು! ಅಭಿಪ್ರಾಯಗಳಿಂದಾಗಿಯೇ ಈ ಜಗತ್ತು ಎದ್ದು ನಿಂತಿರುವುದು. ಅಭಿಪ್ರಾಯದಿಂದಾಗಿ, ಅವನು ಕಳ್ಳ, ಇವನು ನೀಚ, ಅವನು ದುಷ್ಟ, ಹೀಗೆಲ್ಲಾ ಹೇಳುತ್ತಾರೆ. ಮನಸ್ಸು ಕೂಡ ಅಭಿಪ್ರಾಯದಿಂದಾಗಿದೆ. ಮನಸ್ಸಿನ ತಂದೆ (Father) ಅಭಿಪ್ರಾಯವಾಗಿದೆ. ಮನಸ್ಸಿನ ತಂದೆ ಹಾಗು ತಾಯಿಯ ಬಗ್ಗೆ ಯಾರೂ ತಿಳಿಸಿಲ್ಲ.

ನಮಗೆ ಯಾವ ಅಭಿಪ್ರಾಯವೂ ಇಲ್ಲ. ಯಾರಾದರೂ ನಮ್ಮ ಕಿಸೆಯಿಂದ 200 ರೂಪಾಯಿಯನ್ನು ತೆಗೆದುಕೊಂಡು ಹೋಗುವುದನ್ನು ನಾವು ಗಮನಿಸಿದರೂ ಸಹ, ಮರುದಿನ ಆ ವ್ಯಕ್ತಿಯು ನಮ್ಮ ಎದುರಿಗೆ ಬಂದಾಗ, 'ಅವನು ಕಳ್ಳನೆಂದು' ನಮಗೆ ಭಾಸವಾಗುವುದಿಲ್ಲ. ನಾವು ಪೂರ್ವಗ್ರಹವನ್ನು ಇಟ್ಟುಕೊಳ್ಳುವುದಿಲ್ಲ. ಅವನನ್ನು 'ಕಳ್ಳನೆಂದು' ಹೇಳಿದರೆ ಭಗವಂತನ ಮೇಲೆ ಆರೋಪವನ್ನು ಹೊರೆಸಿದಂತಾಗುತ್ತದೆ. ಏಕೆಂದರೆ, ಅವನೊಳಗೂ ಭಗವಂತ ವಾಸವಾಗಿದ್ದಾನೆ.

**ಪ್ರಶ್ನಕರ್ತ:** ಅಭಿಪ್ರಾಯವು ಹೇಗೆ ಉಂಟಾಗುತ್ತದೆ?

**ದಾದಾಶ್ರೀ:** ಅಭಿಪ್ರಾಯವು ನಮ್ಮ ತಪ್ಪು ಕಲ್ಪನೆಯಾಗಿದೆ (Wrong Belief). ಆ ವ್ಯಕ್ತಿಯು ಕಳ್ಳನೆಂಬ ವಿಚಾರವನ್ನು ಕೇಳುತ್ತಲೇ, ನಾವು ನಿಜವೆಂದು ನಂಬುತ್ತೇವೆ; ಅದರಂತೆಯೇ ನಮ್ಮಲ್ಲಿ ಅಭಿಪ್ರಾಯವು ಮೂಡಿಬಿಡುತ್ತದೆ. ಯಾರ ಬಗ್ಗೆಯೂ ಅಭಿಪ್ರಾಯವನ್ನು ಇಟ್ಟುಕೊಳ್ಳಬಾರದು. ಅವರು ಸಾಹುಕಾರರೇ ಆಗಿರಲಿ, ಒಳ್ಳೆಯ ವ್ಯಕ್ತಿಯೇ ಆಗಿದ್ದರೂ, ಅವರ ಬಗ್ಗೆ ಕೂಡಾ ಅಭಿಪ್ರಾಯವನ್ನು ಇಟ್ಟುಕೊಳ್ಳಲು ಹೋಗಬಾರದು.

**ಪ್ರಶ್ನಕರ್ತ:** ಮನಸ್ಸನ್ನು ಹೇಗೆ ನಿಯಂತ್ರಣದಲ್ಲಿ (Control) ಇಡುವುದು?

**ದಾದಾಶ್ರೀ:** ಮನಸ್ಸನ್ನು Control ಮಾಡುವ ಅಗತ್ಯವೇ ಇಲ್ಲ. ಎಲ್ಲಾ ಜನರು ಏನು

ಮಾಡುತ್ತಾರೆ? ಯಾವುದನ್ನು Control ಮಾಡಬೇಕಾಗಿಲ್ಲವೋ, ಅದನ್ನು ನಿಯಂತ್ರಿಸಲು ಪ್ರಯತ್ನಿಸುತ್ತಾರೆ ಮತ್ತು ಯಾವುದನ್ನು ನಿಯಂತ್ರಿಸಬೇಕು ಎಂಬುದನ್ನು ತಿಳಿದುಕೊಂಡಿಲ್ಲ. ಇದರಲ್ಲಿ ಬಡಪಾಯಿ ಮನಸ್ಸಾದರೂ ಏನು ಮಾಡುತ್ತದೆ?

ನಮ್ಮ ಬಳಿಗೆ ಪ್ರತಿನಿತ್ಯ ಒಬ್ಬ ಲೇಖಕರು ಬರುತ್ತಿದ್ದರು, ಅವರು ನಮ್ಮನ್ನು ಏನು ಕೇಳಿದರೆಂದರೆ, 'ನನ್ನ ಮನಸ್ಸಿನ ಶಸ್ತ್ರಚಿಕಿಸ್ಥೆ (Operation) ಮಾಡಿಬಿಡಿ' ಎಂದು. ಆಗ ನಾನು, 'ಕೊಡಿ ಈಗಲೇ ಮಾಡಿಬಿಡುತ್ತೇನೆ. ಆದರೆ ನಮಗೆ ಸಾಕ್ಷಿಗಾರನ ಹಸ್ತಾಕ್ಷರ (Witness) ಬೇಕಾಗುತ್ತದೆ.' ಎಂದು ಹೇಳಿದೆ. ಅವರು ಕೇಳಿದರು, 'Witness ಯಾಕೆ ಬೇಕು?' ನಾನು ಹೇಳಿದೆ, 'ಶಸ್ತ್ರಚಿಕಿಸ್ಥೆ ಮಾಡಿದ ಮೇಲೆ ಏನಾದರು ತೊಂದರೆಯಾದರೆ ನನ್ನ ಕುತ್ತಿಗೆ ಹಿಡಿಯುತ್ತೀರಿ.' ಅದಕ್ಕೆ ಅವರು, 'ಅರೇ, ಅದರಿಂದ ಏನು ತೊಂದರೆಯಾಗುತ್ತದೆ? ಮನಸ್ಸು ಹೊರಟುಹೋದ ಮೇಲೆ ಎಷ್ಟೊಂದು ಆನಂದ ಮತ್ತು ಎಷ್ಟೊಂದು ಮೋಜು-ಮಜಾ ಮಾಡಬಹುದಲ್ಲ?' ಎಂದರು. ನಾನು ಹೇಳಿದೆ, 'ಹಾಗಲ್ಲ, ನಾನು ಮೊದಲೇ ಹೇಳಿಬಿಡುತ್ತೇನೆ ಏನೆಂದರೆ, ನಾನು ಮನಸ್ಸನ್ನು Operation ಮಾಡಿ ತೆಗೆದುಬಿಟ್ಟರೆ, ಆಮೇಲೆ ನೀವು Absent-Minded (ಮನಸ್ಸೇ ಇಲ್ಲದವರ) ಹಾಗೆ ಆಗಿಬಿಡುತ್ತೀರಿ, ಇದು ನಿನಗೆ ಒಪ್ಪಿಗೆಯೇ?' ಆಗ ಅವರು, 'ಇಲ್ಲ ನನಗೆ Absent-Minded ಆಗುವುದುಬೇಡ' ಎಂದು ಹೇಳಿದರು. ಅವರಿಗೆ, ನಾವು ಎನ್ನನ್ನು ಹೇಳಬಯಸುತ್ತಿದ್ದೇವೆ ಎನ್ನುವುದು ಈಗ ಅರ್ಥವಾಯಿತು. ಮನಸ್ಸನ್ನು ಅಂತ್ಯ ಮಾಡಬೇಕಾದ ಅವಶ್ಯಕತೆ ಏನೂ ಇಲ್ಲ. ಮನಸ್ಸಿಗೆ ಯಾವ ರೀತಿಯಲ್ಲೂ ತೊಂದರೆ ಕೊಡುವುದು ಬೇಡ, ಅದನ್ನೆಂದೂ ಅಲುಗಾಡಿಸುವುದು ಬೇಡ. ಮನಸ್ಸನ್ನು ಯಾವಾಗ ಅಲುಗಾಡಿಸಬೇಕೆಂದರೆ, ಅದು ತಳಮಳಗೊಂಡಾಗಷ್ಟೇ ಅದನ್ನು ಏಕಾಗ್ರತೆಗೆ ತರಲು ಪ್ರಯತ್ನಿಸಬೇಕಾಗುತ್ತದೆ. ಯಾವ ಆತಂಕವೂ ಇಲ್ಲದಾಗ ಏಕಾಗ್ರತೆಗೆ ತರಬೇಕಾದ ಅವಶ್ಯಕತೆಯೇ ಇಲ್ಲ.

ಆತ್ಮಕ್ಕೆ ಮರಣವೇ ಇರುವುದಿಲ್ಲ. Relative ನಾಶವಾಗುತ್ತದೆ. ಮನಸ್ಸು, Real ಆಗಿದೆಯೋ ಅಥವಾ Relative ಆಗಿದೆಯೋ?

**ಪ್ರಶ್ನಕರ್ತ:** ಮನಸ್ಸು, ದೇಹದೊಂದಿಗಿರುವಾಗ 'Relative' ಆಗಿದೆ ಹಾಗೂ ಅದು ಆತ್ಮದೊಂದಿಗೆ ಇದ್ದಾಗ, 'Real' ಆಗಿದೆ.

**ದಾದಾಶ್ರೀ:** ಈ ಎರಡೂ ನಿಜವೆ. ಮನಸ್ಸು, ಶರೀರದೊಂದಿಗೆ ಇರುವುದನ್ನು ನಾವು 'ದ್ರವ್ಯ ಮನಸ್ಸು' ಎಂದು ಕರೆಯುತ್ತೇವೆ ಹಾಗೂ ಮನಸ್ಸು, ಆತ್ಮದೊಂದಿಗೆ ಇದ್ದರೆ, ಅದನ್ನು 'ಭಾವ-ಮನಸ್ಸು' ಎಂದು ಕರೆಯುತ್ತೇವೆ. ನಾವು 'ಭಾವ-ಮನಸ್ಸನ್ನು' Operation (ಆತ್ಮಸಾಕ್ಷಾತ್ಕಾರ) ಮಾಡಿ ತೆಗೆದು ಬಿಡುತ್ತೇವೆ. ಯಾವುದು ಆತ್ಮದೊಂದಿಗಿರುವ ಮನಸ್ಸಿದೆಯೋ, ಅದರ ತಂದೆ ಮತ್ತು ತಾಯಿಯ ಹೆಸರೇನು? ಅಭಿಪ್ರಾಯವೇ ಮನಸ್ಸಿನ ತಂದೆ ಹಾಗು ಭಾಷೆಯೇ ಮನಸ್ಸಿನ ತಾಯಿ (Opinion is the Father and Language is the Mother of the Mind.).

**ಪ್ರಶ್ನಕರ್ತ:** ಹಾಗಾದರೆ, ಆತ್ಮದ ತಂದೆ ಹಾಗು ತಾಯಿ ಯಾರು (Then Who is the Father and Mother of the Soul)?

**ದಾದಾಶ್ರೀ:** ತಂದೆಯು ಇಲ್ಲ, ತಾಯಿಯು ಇಲ್ಲ, ಜನನವೂ ಇಲ್ಲ, ಮರಣವು ಕೂಡಾ ಆತ್ಮಕ್ಕೆ ಇಲ್ಲ. ಎಲ್ಲಿ ಹುಟ್ಟು-ಸಾವು ಇದೆಯೋ, ಅಲ್ಲಿ ಮಾತ್ರ ತಂದೆ ಹಾಗು ತಾಯಿ ಇರುತ್ತಾರೆ (No Father, No Mother, No Birth, No Death Of The Soul. Where there is Death and Birth, Then there is Father and Mother). ಮನಸ್ಸನ್ನು ನಿಲ್ಲಿಸಬೇಕಿದ್ದರೆ ಅಭಿಪ್ರಾಯವನ್ನು ಇಟ್ಟುಕೊಳ್ಳಬೇಡಿ, ಆಗ ಮನಸ್ಸು ನಾಶವಾಗುತ್ತದೆ.

**ಪ್ರಶ್ನಕರ್ತ**: ನೀವು ಹೇಳಿದ ಹಾಗೆ ಮನಸ್ಸನ್ನು ನಾಶಗೊಳಿಸಿದರೆ, ನಮಗೆ ಮಾರ್ಗದರ್ಶನ ಮಾಡುವವರು ಯಾರು? ಮನಸ್ಸೇ ಇಲ್ಲವಾದಾಗ ಮಾರ್ಗದರ್ಶನ ಎಲ್ಲಿಂದ ಸಿಗುತ್ತದೆ? ನಮಗೆ ಮಾರ್ಗದರ್ಶನ (guide) ಮಾಡಲು ಮನಸ್ಸು ಬೇಕಲ್ಲವೇ?

**ದಾದಾಶ್ರೀ:** ಆತ್ಮದೊಂದಿಗೆ ಇರುವ ಮನಸ್ಸು (Mind with Soul) 'ಭಾವ ಮನಸ್ಸು' ಅದನ್ನು ನಿರ್ಮೂಲನೆ ಮಾಡಲಾಗಿದೆ, ಆದರೆ ದೇಹದೊಂದಿಗಿರುವ ಮನಸ್ಸು (Mind with Body) 'ದ್ರವ್ಯ ಮನಸ್ಸು' ಹಾಗೆಯೇ ಇರುತ್ತದೆ. ದ್ರವ್ಯ ಮನಸ್ಸು, 'Discharge' ಆಗುವಂತಹ ಮನಸ್ಸು, ಅದು ಮಾತ್ರ ಉಳಿದಿರುತ್ತದೆ. ಹೊಸದಾಗಿ 'Charge' ಆಗುವುದು ಇರುವುದಿಲ್ಲ. ಶರೀರದ ಜೊತೆಯಲ್ಲಿ ಇರುವ ಮನಸ್ಸು, ಸ್ಥೂಲ ಮನಸ್ಸು. ಅದು ಕೇವಲ ವಿಚಾರವನ್ನಷ್ಟೇ ಮಾಡುತ್ತದೆ.

ಮಾವಿನ ಹಣ್ಣು ತಿನ್ನುವಾಗ ಅದು ಹುಳಿಯಾಗಿದ್ದರೆ ಅದನ್ನು ಪಕ್ಕಕ್ಕೆ ಇಟ್ಟುಬಿಡಿ,

ಆದರೆ, 'ಅದು ಹುಳಿ' ಎಂಬ ಅಭಿಪ್ರಾಯವನ್ನು ಇಟ್ಟುಕೊಂಡರೆ, ಮನಸ್ಸಿನ ಜನ್ಮವಾಗುತ್ತದೆ. ಮಾವು ಚೆನ್ನಾಗಿದ್ದರೆ ತಿಂದುಬಿಡಿ, ಅದರ ಬಗ್ಗೆ ಅಭಿಪ್ರಾಯವನ್ನು ನೀಡುವ ಅವಶ್ಯಕತೆಯಾದರೂ ಏನು? ಚಹಾವನ್ನು ಕುಡಿಯಲು ನೀವು ಹೋಟೆಲಿಗೆ ಹೋದಾಗ, ಚಹಾ ಚೆನ್ನಾಗಿಲ್ಲವಾದರೆ ಬಿಟ್ಟು, ಹಣ ಕೊಟ್ಟು ಬಂದು ಬಿಡಬೇಕು. ಅಲ್ಲಿ ನಿಮ್ಮ ಅಭಿಪ್ರಾಯವನ್ನು ತಿಳಿಸುವ ಅವಶ್ಯಕತೆಯಾದರು ಏನಿದೆ?

**ಪ್ರಶ್ನಕರ್ತ:** ಸಂಕಲ್ಪ ಹಾಗೂ ವಿಕಲ್ಪಗಳು ಮನಸ್ಸಿನ ಸ್ವಭಾವಗಳೇ?

**ದಾದಾಶ್ರೀ:** ಎಲ್ಲಿಯವರೆಗೆ ಭ್ರಾಂತಿ ಇದೆಯೋ, ಅಲ್ಲಿಯವರೆಗೆ ತನ್ನ (ಅಹಂಕಾರದ) ಸ್ವಭಾವದ್ದಾಗಿರುತ್ತದೆ. ಮನಸ್ಸು, ಅದರ ಧರ್ಮದಲ್ಲೇ ಇರುತ್ತದೆ, ನಿರಂತರ ವಿಚಾರ ಮಾಡುತ್ತಲೇ ಇರುತ್ತದೆ. ಆದರೆ ಭ್ರಾಂತಿಯಿಂದ ಮನುಷ್ಯ ಹೇಳುತ್ತಾನೆ, 'ನನಗೆ ಅಂತಹ ವಿಚಾರ ಬರುತ್ತಿದೆ' ಎಂದು. ವಿಚಾರವು ಮನಸ್ಸಿನ Item. ಅದು ಮನಸ್ಸಿನ ಸ್ವತಂತ್ರ ಧರ್ಮವಾಗಿದೆ. ಆದರೆ ನಾವು ಇನ್ನೊಬ್ಬರ ಧರ್ಮವನ್ನು ನಮ್ಮದೆಂದು ತೆಗೆದುಕೊಂಡು ಬಿಡುತ್ತೇವೆ. ಇದರಿಂದಾಗಿ ಸಂಕಲ್ಪ-ವಿಕಲ್ಪಗಳು ಉಂಟಾಗುತ್ತವೆ. ನಾವು (ಜ್ಞಾನಿಗಳು) ಸದಾ ನಿರ್ವಿಕಲ್ಪದಲ್ಲಿಯೇ ಇರುತ್ತೇವೆ. ಮನಸ್ಸಿನಲ್ಲಿ ಯಾವುದೇ ವಿಚಾರವು ಬಂದರೂ, ಅದರಲ್ಲಿ ನಾವು ತನ್ಮಯರಾಗುವುದಿಲ್ಲ. ಜಗತ್ತಿನ ಜನರು, ಮನಸ್ಸಿನಲ್ಲಿ ಒಳ್ಳೆಯ ವಿಚಾರಗಳು ಬಂದರೆ ತನ್ಮಯರಾಗಿ ಬಿಡುತ್ತಾರೆ ಮತ್ತು ಕೆಟ್ಟ ವಿಚಾರಗಳು ಬಂದಾಗ ಏನು ಹೇಳುತ್ತಾರೆ? ನಮಗೆ ಕೆಟ್ಟ ವಿಚಾರಗಳು ಬರುತ್ತವೆ ಎಂದು ಅವುಗಳಿಂದ ಹೊರಗುಳಿಯುತ್ತಾರೆ.

**ಪ್ರಶ್ನಕರ್ತ:** ನಾನು ಮನಸ್ಸಿನ ಬಗ್ಗೆ ಏನು ತಿಳಿದಿದ್ದೇನೆಂದರೆ, ಈ ಮನಸ್ಸಿನಲ್ಲಿ ಇನ್ನು ಹಲವಾರು ವಿಭಾಗಗಳಿವೆ ಅವುಗಳು ಯಾವುದೆಂದರೆ, ಈ ಕಲ್ಪನೆ, ಸ್ವಪ್ನ, ಸಂಕಲ್ಪ-ವಿಕಲ್ಪಗಳು ಎಂದು.

**ದಾದಾಶ್ರೀ:** ಇಲ್ಲ, ಅವುಗಳು ಮನಸ್ಸಿನ ವಿಭಾಗಗಳಲ್ಲ. ಮನಸ್ಸು ಅಂದರೇನು, 'ವಿಚಾರಗಳ ಸ್ಥಿತಿಯಲ್ಲಿ ಇರುವುದೇ ಮನಸ್ಸು' ಅದುಬಿಟ್ಟರೆ ಇನ್ಯಾವುದೇ ಸ್ಥಿತಿಯಲ್ಲಿ ಮನಸ್ಸು ಇರುವುದಿಲ್ಲ.

**ಪ್ರಶ್ನಕರ್ತ:** ಮನಸ್ಸಿನಲ್ಲಿ ಸಂಕಲ್ಪ-ವಿಕಲ್ಪಗಳು ಬರುತ್ತವೆಯಲ್ಲ ಅವು ಏನು?

**ದಾದಾಶ್ರೀ:** ಅವು ಸಂಕಲ್ಪ-ವಿಕಲ್ಪಗಳಲ್ಲ. ಅದು ಮನಸ್ಸೇ ಆಗಿದೆ. ಮನಸ್ಸು ವಿಚಾರ ಮಾಡುತ್ತದೆ.

ನಮ್ಮ ಜನರು ಏನು ಹೇಳುತ್ತಾರೆ, 'ಕುಸ್ಸಂಗದಲ್ಲಿ ಬೀಳುವ ಬದಲು ಸತ್ಸಂಗದಲ್ಲಿ ಬೆಳೆಯಬೇಕು.' ಸತ್ಸಂಗದಲ್ಲಿ ಬೆರೆಯುವುದರಿಂದ ಏನಾಗುತ್ತದೆಂದರೆ, ಅಭಿಪ್ರಾಯಗಳು

ಬದಲಾಗುತ್ತವೆ. ಇದರಿಂದ ಅವರ ಜೀವನ (Life) ಬದಲಾಗುತ್ತದೆ. ಆದರೆ, ಯಾರಿಗೆ ಸತ್ಸಂಗದ ಅವಕಾಶ ಸಿಗುವುದಿಲ್ಲವೋ ಅಂಥವರು ಏನು ಮಾಡುವುದು? ಅಂಥವರಿಗೂ ನಾನು ಇನ್ನೊಂದು ದಾರಿ ತೋರಿಸಿ ಕೊಡುತ್ತೇನೆ. ಅದೇನೆಂದರೆ, 'ನಿಮ್ಮ ಅಭಿಪ್ರಾಯವನ್ನು ಬದಲಿಸಬೇಕು, ಕುಸ್ಸಂಗದಲ್ಲಿ ಕುಳಿತ್ತಿದ್ದರೂ ಸಹ ಅಭಿಪ್ರಾಯವನ್ನು ಬದಲಿಸಬೇಕು.'

ಯಾವುದೇ ವಿಚಾರ ಮಾಡಬೇಕಿದ್ದರೂ ಆ ಸಮಯದಲ್ಲಿ ಮನಸ್ಸು ಇರುತ್ತದೆ. ಬೇರೆ ಸಮಯದಲ್ಲಿ ಮನಸ್ಸು ಇರುವುದಿಲ್ಲ. ಯಾವಾಗ ಜಿಲೇಬಿ ತಿನ್ನಬೇಕೆಂಬ ವಿಚಾರವು ಬರುವುದೋ, ಆಗ ಆ ವಿಚಾರವು ಅಹಂಕಾರಕ್ಕೆ ಇಷ್ಟವಾಗುವುದಲ್ಲದೆ, 'ಹೌದು, ಬಹಳ ಒಳ್ಳೆಯ ವಿಚಾರ, ಜಿಲೇಬಿಯನ್ನು ತರಿಸೋಣ' ಎಂಬ ಅಭಿಪ್ರಾಯಕ್ಕೆ ಬರುತ್ತದೆ. ಇದರಲ್ಲಿ ಮನಸ್ಸು ಎನ್ನನ್ನೂ ಮಾಡುವುದಿಲ್ಲ. ಈ ಅಹಂಕಾರ ಇದೆಯಲ್ಲ, ಅದು ಬೀಜ ಹಾಕುತ್ತದೆ. ಏನು ಮಾಡುತ್ತದೆ?

**ಪ್ರಶ್ನಕರ್ತ:** ಸಂಕಲ್ಪದ ಬೀಜ ಹಾಕುತ್ತದೆ.

**ದಾದಾಶ್ರೀ:** ಹೌದು, ಹಾಗೂ ವಿಕಲ್ಪವನ್ನು ಹೇಗೆ ಮಾಡುತ್ತದೆ? ಉದಾಹರಣೆಗೆ: ಯಾರಾದರು ಈ ಅಂಗಡಿ ನಿಮ್ಮದೆ? ಎಂದು ಕೇಳಿದರೆ, ಆಗ ಏನು ಹೇಳುತ್ತಾನೆ, ಹೌದು. ನಾನೇ ಇದರ ಮಾಲೀಕ ಎಂದು ಹೇಳುತ್ತಾನೆ. ಇದನ್ನೇ ವಿಕಲ್ಪವೆನ್ನುವುದು. ಅರ್ಥವಾಯಿತಲ್ಲವೇ? ಯಾವಾಗ ಯೋನಿಯಲ್ಲಿ ಬೀಜ ಹಾಕಲಾಗುತ್ತದೆ, ಆಗ ಅದನ್ನು ಸಂಕಲ್ಪ-ವಿಕಲ್ಪಗಳೆಂದು ಕರೆಯಲಾಗುತ್ತದೆ. ಮನಸ್ಸಿನಲ್ಲಿ ಸಂಕಲ್ಪ-ವಿಕಲ್ಪಗಳಿರುವುದಿಲ್ಲ.

**ಪ್ರಶ್ನಕರ್ತ:** ಹಾಗಾದರೆ ವಿಚಾರ ಹಾಗು ಅಭಿಪ್ರಾಯವು ಒಂದೇ ವಸ್ತುವೇ?

**ದಾದಾಶ್ರೀ:** ಅಲ್ಲ, ಎರಡು ಬೇರೆ ಬೇರೆಯಾಗಿದೆ. ಅಭಿಪ್ರಾಯವು ಕಾರಣವಾಗಿದೆ (Cause) ಹಾಗೂ ವಿಚಾರವು ಪರಿಣಾಮವಾಗಿದೆ(effect).

ಯಾರಿಗಾದರು, 'ಏನಿಷ್ಟು ಕಪ್ಪಗಿದ್ದೀಯ?' ಎಂದು ಕೇಳಿದರೆ, ಆಗ ಅವನು, 'ನಾನಂತೂ ಬೆಳ್ಳಗೆಯೇ ಇದ್ದೇನೆ', ಎಂದು ಹೇಳುತ್ತಾನೆ. ಇದನ್ನು ವಿಕಲ್ಪವೆಂದು ಕರೆಯಲಾಗುತ್ತದೆ. ಅರ್ಥವಾಗುತ್ತಿದೆಯೇ ನಿಮಗೆ? (ಸುಲಭವಾಗಿ ತಿಳಿಯಬೇಕಿದ್ದರೆ, 'ವಿಕಲ್ಪ' ಎಂದರೆ, 'ನಾನು' ಮತ್ತು 'ಸಂಕಲ್ಪ' ಎಂದರೆ, 'ನನ್ನದು')

**ಪ್ರಶ್ನಕರ್ತ:** ಮನಸ್ಸಿನಲ್ಲಿ ಸಂಕಲ್ಪ-ವಿಕಲ್ಪಗಳು ಇಲ್ಲವೇ?

**ದಾದಾಶ್ರೀ:** ಮನಸ್ಸಿನಲ್ಲಿ ಸಂಕಲ್ಪ-ವಿಕಲ್ಪಗಳಿಲ್ಲ. ಮನಸ್ಸು ನಿರಾಸಕ್ತವಾಗಿದೆ, ಸಂಪೂರ್ಣವಾಗಿ ನಿರಾಸಕ್ತವಾಗಿದೆ (Mind is Neutral, Complete Neutral).

**ಪ್ರಶ್ನಕರ್ತ:** ಹಾಗಾದರೆ ಅಹಂಕಾರವು ಸಂಕಲ್ಪ-ವಿಕಲ್ಪಗಳನ್ನು ಮಾಡುವುದೇ?

**ದಾದಾಶ್ರೀ:** ಹೌದು, ಅಹಂಕಾರವೇ ಸಂಕಲ್ಪ-ವಿಕಲ್ಪಗಳನ್ನು ಮಾಡುವುದು.

ಎಲ್ಲಾ ಜನರು ಮನಸ್ಸನ್ನು ವಶಪಡಿಸಿಕೊಳ್ಳಬೇಕೆಂದು ಹೇಳುತ್ತಾರೆ. ಆದರೆ, ಮನಸ್ಸನ್ನು ವಶಪಡಿಸಿಕೊಳ್ಳಲು ಆಗುವುದೇ ಇಲ್ಲ. ಅಯ್ಯೋ, ಆ ಬಡಪಾಯಿ ಮನಸ್ಸನ್ನು ಯಾಕೆ ವಶಪಡಿಸಿಕೊಳ್ಳಲು ಹೋಗುವಿರಿ? ನಾನು ಏನು ಹೇಳುತ್ತೇನೆಂದರೆ, 'ನೀನು ಸ್ವತಃ ನಿನ್ನನ್ನು ವಶಪಡಿಸಿಕೊ' (Control Thy Self)! ಮನಸ್ಸನ್ನು ವಶಪಡಿಸಬೇಕಿದ್ದರೆ, ಮನಸ್ಸು ಯಾರ ಮಗನೆಂದು ಏನಾದರು ಹುಡುಕ್ಕಿದ್ದೀರಾ? ಎಲ್ಲಾ ಜನರು ಏನು ಹೇಳುತ್ತಾರೆ, ಮನಸ್ಸನ್ನು ಭಗವಂತ ಕೊಟ್ಟಿದ್ದಾನೆ ಎಂದು. ಹಾಗಿದ್ದರೆ, ಭಗವಂತನು ಇಂಥ ಮನಸ್ಸನ್ನು ಯಾಕೆ ಕೊಟ್ಟಿದ್ದಾನೆ? ಸುಮ್ಮನೆ, ಯಾಕೆ ಭಗವಂತನಿಗೆ ಆಕ್ಷೇಪಿಸುವಿರಿ? ಭಗವಂತ ಮನಸ್ಸನ್ನು ಎಲ್ಲಿಂದ ತರಬೇಕು? ಭಗವಂತನಿಗೆ ಮನಸ್ಸೆನ್ನುವುದು ಏನಾದರು ಇದಿದ್ದರೆ ಭಗವಂತನಿಗೂ ಕಷ್ಟವಾಗುತ್ತಿತ್ತು. ಮನಸ್ಸು ತೊಂದರೆ ಕೊಡುವುದಿಲ್ಲ. ಮನಸ್ಸನ್ನು ಯಾಕೆ ನಿಯಂತ್ರಿಸಲು ಹೋಗುತ್ತೀರಾ? ಸ್ವತಃ ನಿನ್ನನ್ನು ನಿಯಂತ್ರಿಸಿಕೊ (Control Thy Self)! ಮನಸ್ಸಿನ ತಂದೆ ಯಾರು? ಈ ಅಭಿಪ್ರಾಯವೇ ಮನಸ್ಸಿನ ತಂದೆ (Opinion is the Father) ಹಾಗು ಮನಸ್ಸಿನ ಮಾತೃ ಯಾರು? ಭಾಷೆಯೇ ಮನಸ್ಸಿನ ಮಾತೃ (Language is the Mother)! ಕ್ರಿಶ್ಚಿಯನ್ ಮನಸ್ಸಿಗೆ ಕ್ರಿಶ್ಚಿಯನ್ ಮಾತೃ (ಅದರ ಆಧಾರದಿಂದ ಮಾತನಾಡುವ ಭಾಷೆ) ಹಾಗೂ ಭಾರತದಲ್ಲಿನ ಮನಸ್ಸಿಗೆ ಭಾರತದಲ್ಲಿನ ಭಾಷೆಗಳು ಬೇಕಾಗುತ್ತವೆ. ತಾಯಂದಿರು ಬೇರೆ ಬೇರೆ (Mothers are separate), ಭಾಷೆಯ ರೂಪದಲ್ಲಿ ತಾಯಂದಿರು ಬೇರೆ ಇದ್ದರೂ ಅಭಿಪ್ರಾಯದ ರೂಪದಲ್ಲಿ ತಂದೆ ಎಲ್ಲರಿಗೂ ಸರ್ವೇ ಸಾಮಾನ್ಯ (Opinion is the Father, Common for All). ಕ್ರಿಶ್ಚಿಯನ್ ಭಾಷೆ ಹಾಗು ಅಭಿಪ್ರಾಯದಿಂದ ಕ್ರಿಶ್ಚಿಯನ್ ಮನಸ್ಸು.

**ಪ್ರಶ್ನಕರ್ತ:** ನೀವು ಪದವೀದರರೆ? ನಿಮ್ಮದು ಬಹಳ ಉನ್ನತ ಮಟ್ಟದ ಭಾಷೆಯಾಗಿದೆ.

**ದಾದಾಶ್ರೀ:** ಇಲ್ಲಪ್ಪ, ನಾವು, ಹತ್ತನೇಯ ತರಗತಿಯಲ್ಲಿ ಅನುತ್ತೀರ್ಣರಾಗಿದ್ದೇವೆ (Metric Fail).

ಮನಸ್ಸಿನ ಬಗ್ಗೆ ಸಮಾಧಾನವನ್ನು (solution) ಈ ಜಗತ್ತಿನಲ್ಲಿ ಯಾರೂ ನೀಡಲಿಲ್ಲ, ಹಾಗಾಗಿ ನಾವು Solution ನೀಡಬೇಕಾಗಿದೆ.

ಮನಸ್ಸು ಅನ್ನುವುದು ಹೇಗಿದೆ? ಮನಸ್ಸಿನ ತಾಯಿ-ತಂದೆ ಯಾರು? ಮನಸ್ಸಿನ ಜನ್ಮ ಎಲ್ಲಿಂದ ಆಗಿದೆ? ಇಲ್ಲಿ ಮನಸ್ಸಿನ ತಾಯಿ-ತಂದೆ ಯಾರೆಂದು ಅರಿತುಕೊಳ್ಳುವುದರಿಂದ ಮನಸ್ಸು ಹೊರಟು ಹೋಗುತ್ತದೆ. ಇಬ್ಬರಲ್ಲಿ ಒಬ್ಬರು ಇಲ್ಲವಾದರೂ, ಆಗ ಮನಸ್ಸು ಇರಲು ಹೇಗೆ ಸಾಧ್ಯ?

ಒಂದು ಪುಸ್ತಕವನ್ನೇ ಬರೆಯಬಹುದಾದಷ್ಟು ವಿಚಾರಗಳನ್ನು ಒಂದೇ ವಾಕ್ಯದಲ್ಲಿ ನಾನು ತಿಳಿಸಿಕೊಡುತ್ತೇವೆ. ಅದೇನೆಂದರೆ, ಅಭಿಪ್ರಾಯವೇ ಮನಸ್ಸಿನ ತಂದೆ ಹಾಗು ಭಾಷೆಯೇ ಅದರ ಮಾತೃ (Opinion is the Father and Language is the Mother of Mind). ಮರಾಠಿ ಭಾಷೆಯಾಗಿದ್ದರೆ ಮಹಾರಾಷ್ಟ್ರದ ಮನಸ್ಸು. ಇಂಗ್ಲಿಷ್ ಭಾಷೆಯಾಗಿದ್ದರೆ ಆಂಗ್ಲ ಮನಸ್ಸು. ಸ್ವಲ್ಪವಾದರೂ ನಿಮಗೆ ತಿಳಿಯಲು ಸಾಧ್ಯವಾಗುತ್ತಿದೆಯೇ?

ನಮಗೆ ಯಾರ ಬಗ್ಗೆಯು ಅಭಿಪ್ರಾಯವೇ ಇರುವುದಿಲ್ಲ. ನಾವು ಎರಡು ವಸ್ತುವನ್ನು ನೋಡುತ್ತೇವೆ. ಒಂದು 'Real' ಎನ್ನುವಲ್ಲಿ, ಸ್ವಯಂ ಭಗವಂತನೆಂದು ಹಾಗೂ ಮತ್ತೊಂದು 'Relative' ಎನ್ನುವಲ್ಲಿ, ಅವರನ್ನು ನಾವು ನಿರ್ದೋಷಿಗಳೆಂದು ಪರಿಗಣಿಸುತ್ತೇವೆ. ಹಾಗಿರುವಾಗ, ಅಭಿಪ್ರಾಯವು ಇರಲು ಹೇಗೆ ಸಾಧ್ಯ? ಅಭಿಪ್ರಾಯದವರಿಗೆ ಎಲ್ಲೆಡೆಯೂ ದೋಷಗಳೇ ಕಾಣುತ್ತವೆ. ನಿಜವಾದ ವಿಚಾರವೇನೆಂದರೆ, ಇಡೀ ಜಗತ್ತೇ ನಿರ್ದೋಷವಾಗಿದೆ. ಕಣ್ಣಿನಿಂದ ನೋಡಿದಾಕ್ಷಣ ಅವೆಲ್ಲಾ ವಿಚಾರಗಳು ನಿಜವಾಗುವುದಿಲ್ಲ. ಇವೆಲ್ಲಾ ಭ್ರಾಂತಿಯಾಗಿದೆ. ವಾಸ್ತವದಲ್ಲಿ ಈ ಜಗತ್ತಿನಲ್ಲಿ ಯಾರೂ ದೋಷಿಗಳಿಲ್ಲ. ಆದರೆ ನೀವು ದೋಷಿಗಳೆಂದು ಪರಿಗಣಿಸುವುದರಿಂದ, ಅದು ಸ್ವತಃ ನಿಮಗೆ ಹಾನಿಮಾಡುತ್ತದೆ. ನಮ್ಮನ್ನು ಯಾರೇ ನಿಂದಿಸಲು ಬಂದರೂ ಸಹ ನಾವು ಅವರನ್ನು ದೋಷಿಗಳೆಂದು ನೋಡುವುದಿಲ್ಲ.

**ಪ್ರಶ್ನಕರ್ತ:** ಅಂತಹ ದೃಷ್ಟಿ ಮೂಡಿದರೆ ಸಾಕು. ಆಗ ಈ ಜಗತ್ತಿನ ಯಾವ ಬಂಧನವೂ ಇರುವುದಿಲ್ಲ ಅಲ್ಲವೇ?

**ದಾದಾಶ್ರೀ:** ಅರೇ, ಆಮೇಲೆ ಅಲ್ಲಿ ಮನಸ್ಸೇ ಇರುವುದಿಲ್ಲ.

ಭಾಷೆಯು ಯಾವಾಗಲು ಅಭಿಪ್ರಾಯದ ಜೊತೆಯಲ್ಲಿಯೇ ಇರುತ್ತದೆ. ಯಾವಾಗ

ಅಭಿಪ್ರಾಯ ಮೂಡುವುದೋ, ಆಗ ಭಾಷೆಗೆ ಹೇಳಲೇಬೇಕಾಗಿ ಬರುತ್ತದೆ. ಅಭಿಪ್ರಾಯವು ಸ್ಥಗಿತವಾದರೆ ಆಗ ಮನಸ್ಸು ಕೊನೆಗೊಳ್ಳುತ್ತದೆ, ಎಂಬುದು ನಿಮ್ಮ ಅರಿವಿಗೆ ಬಂತಲ್ಲವೇ?

ಒಬ್ಬ ಜೈನ ಹುಡುಗನಿಗೆ, ನಿನಗೆ ಮಾಂಸಾಹಾರದ ವಿಚಾರ ಬರುತ್ತದೆಯೇ? ಎಂದು ಕೇಳಿದರೆ, ಅದಕ್ಕೆ ಅವನು, 'ಎಂದೂ ನನಗೆ ಬರುವುದೇ ಇಲ್ಲ' ಎಂದು ಹೇಳುತ್ತಾನೆ. ಹಾಗೆ ಇನ್ನೋರ್ವ ಮುಸ್ಲಿಂ ಹುಡುಗನಿಗೆ ಕೇಳಿದರೆ, 'ನಮಗೆ ಅದು ಪ್ರತಿ ನಿತ್ಯದ ಆಹಾರವಾಗಿದೆ' ಎನ್ನುತ್ತಾನೆ. ಜೈನ ಹುಡುಗ ಹಿಂದಿನ ಜನ್ಮದಲ್ಲಿ ಮಾಂಸಾಹಾರದ ಅಭಿಪ್ರಾಯವೇ ಮಾಡದ ಕಾರಣ ಅವನ ಮನಸ್ಸಿನಲ್ಲಿ ಆ ವಿಚಾರವೇ ಬರುವುದಿಲ್ಲ. ಅದೇ ರೀತಿ ಮುಸ್ಲಿಂ ಹುಡುಗನಿಗೆ, ಅವನ ಹಿಂದಿನ ಜನ್ಮದ ಅಭಿಪ್ರಾಯದ ಅನುಸಾರವಾಗಿ ಈಗಿನ ಮನಸ್ಸಾಗಿದೆ. ಈ ಜನ್ಮದಲ್ಲಿ ಇಂತಹ ಅಭಿಪ್ರಾಯಗಳನ್ನು ತೆಗೆದುಹಾಕಿದರೆ, ಮುಂದಿನ ಜನ್ಮದಲ್ಲಿ ಮನಸ್ಸು, ಅಂತಹ ವಿಚಾರಗಳಿಲ್ಲದೆ, ಸ್ವಚ್ಛವಾಗಿರುತ್ತದೆ.

ಒಂದು ವೇಳೆ, ಯಾರಿಗಾದರು ಹೊಡೆಯಲೇ ಬೇಕೆಂಬ ಅಭಿಪ್ರಾಯವು ನಿಮಗೆ ಇದ್ದರೆ, ಆಗ ಮನಸ್ಸು ಮುಂದಿನ ಜನ್ಮದಲ್ಲಿ ಏನು ಮಾಡುತ್ತದೆ? 'ಅವನಿಗೆ ಹೊಡೆಯಲೇ ಬೇಕು' ಎಂದು ಹೇಳುತ್ತದೆ. ಯಾವ ಅಭಿಪ್ರಾಯ ಇತ್ತೋ, ಅದರಂತೆ ಈಗಿನ ಮನಸ್ಸಿನಲ್ಲಿ ವಿಚಾರವು ಉಂಟಾಗುತ್ತದೆ ಮತ್ತು ಅದು ಈಗ, 'ಹೊಡೆಯಿರಿ, ಹೊಡೆಯಿರಿ' ಎಂದು ಹೇಳುತ್ತದೆ. ನಂತರ ನೀವೇನೆಂದು ದೂಷಿಸುವಿರಿ, 'ನಮ್ಮ ಮನಸ್ಸು ನಮ್ಮ ವಶದಲ್ಲಿ ಇರುವುದಿಲ್ಲ' ಎಂದು. ಮನಸ್ಸನ್ನು ಹೇಗೆ ವಶಪಡಿಸಲಾಗುತ್ತದೆ? ಸ್ವತಃ ನಿಮ್ಮ ಆಧಾರದಿಂದ ಮನಸ್ಸು ಉದ್ಭವಿಸಿದೆ. ನಮ್ಮ ಮಾತು ನಿಮಗೆ ಅರ್ಥವಾಗುತ್ತಿದೆಯೇ?

**ಪ್ರಶ್ನಕರ್ತ:** ಈಗ ಯಾವ ಅಭಿಪ್ರಾಯವನ್ನು ಮಾಡಿದ್ದೇವೋ, ಅದರ ಪರಿಣಾಮ ಮುಂದಿನ ಜನ್ಮದಲ್ಲಿ ಬರುತ್ತದೆ. ಆದರೆ ಇದಕ್ಕೆ ಮೊದಲೇ ಮಾಡಿರುವಂತಹ ಅಭಿಪ್ರಾಯಗಳ ಬಗ್ಗೆ ಏನು ಮಾಡುವುದು?

**ದಾದಾಶ್ರೀ:** ಅದರ ಫಲಸ್ವರೂಪವಾಗಿಯೇ ಈಗಿನ ಮನಸ್ಸು. ಈಗಿನ ಮನಸ್ಸನ್ನು ನೀವು ಮೇಳೈಸಿ ನೋಡಿದರೆ ತಿಳಿಯುತ್ತದೆ, ಹಿಂದಿನ ಜನ್ಮದಲ್ಲಿ ಏನೆಲ್ಲಾ ಅಭಿಪ್ರಾಯಗಳನ್ನು ಮಾಡಲಾಗಿತ್ತು ಎಂದು. ವಿಚಾರಗಳು ಬಂದಾಗ ಬರೆದಿಟ್ಟುಕೊಂಡು, ಯಾವುದೆಲ್ಲಾ ಅಭಿಪ್ರಾಯಗಳನ್ನು ಮಾಡಲಾಗಿತ್ತೆಂದು ನೋಡಿ ಹಾಗೂ ಈಗ ಅಂತಹ ಅಭಿಪ್ರಾಯಗಳನ್ನೆಲ್ಲಾ ಮುರಿದುಹಾಕುವುದರಿಂದ, ಮನಸ್ಸು ಅಂತ್ಯವಾಗಿ ಬಿಡುತ್ತದೆ. ನಮ್ಮ (ಜ್ಞಾನಿ) ಮನಸ್ಸು ಅಂತ್ಯಗೊಂಡಿದೆ.

**ಪ್ರಶ್ನಕರ್ತ:** ನಂತರ ಈ ಮನಸ್ಸು ಯಾವುದರೊಂದಿಗೆ ವಿಲೀನವಾಗುತ್ತದೆ? ಯಾಕೆಂದರೆ ಮನಸ್ಸಿನಿಂದಾಗಿ ಈ ಜಗತ್ತಿದೆ ಅಲ್ಲವೇ?

**ದಾದಾಶ್ರೀ:** ಮನಸ್ಸು ಹಾಗೆಯೇ ವಿಲೀನವಾಗಿ ಹೋಗುತ್ತದೆ (dissolve). ಅದನ್ನು ಮತ್ತೆ ಹುಟ್ಟುಹಾಕದಂತೆ ಇರಬೇಕಾಗುತ್ತದೆ. ಮನಸ್ಸು ನಿರಂತರ Discharge ಆಗುತ್ತಲೇ ಇರುತ್ತದೆ. ಆದರೆ, ನೀವು ಮತ್ತೆ Charge ಮಾಡುತ್ತಲೇ ಇರುವುದಾಗಿದೆ ಅಲ್ಲವೇ? ಅದಕ್ಕೆ, ನಾವು ಏನು ಮಾಡುತ್ತೇವೆ? 'Charge' ಅನ್ನು ನಿಲ್ಲಿಸಿಬಿಡುತ್ತೇವೆ. ನಂತರ ಕೇವಲ Discharge ಆಗುತಲಿರುತ್ತದೆ. ಈಗಿರುವ ನಿಮ್ಮ ಮನಸ್ಸು Charge ಮಾಡಿಕೊಳ್ಳುತ್ತಲೂ ಇದೆ ಹಾಗು Discharge ಆಗುತ್ತಲೂ ಇದೆ.

**ಪ್ರಶ್ನಕರ್ತ:** ಹೀಗಿರುವಾಗ, ಜನ್ಮ-ಮರಣದ ಚಕ್ರದಿಂದ ಮುಕ್ತರಾಗಲು ಹೇಗೆ ಸಾಧ್ಯ?

**ದಾದಾಶ್ರೀ:** ಮನಸ್ಸು ಸಂಪೂರ್ಣ Discharge ಆದ ನಂತರ ಮತ್ತೆ ಹೊಸದಾಗಿ Charge ಮಾಡದೇ ಇದ್ದಾಗ ಜನ್ಮ-ಮರಣದ ಚಕ್ರವು ನಿಂತು ಹೋಗುತ್ತದೆ.

## ಚಿತ್ತದ ಸ್ವರೂಪ

ಮನಸ್ಸಿನ ಬಗ್ಗೆ ಸ್ವಲ್ಪ ಮಟ್ಟಿಗೆ ಅರ್ಥವಾಯಿತಲ್ಲವೇ? ಇನ್ನು ಈ ಚಿತ್ತ ಅಂದರೆ ಏನು? ಇದು ಹೇಗೆ ಉಂಟಾಗಿದೆ?

**ಪ್ರಶ್ನಕರ್ತ:** ಇದು ಮನಸ್ಸಿನ ವಿಭಾಗವೇ ಆಗಿದೆ. ಒಂದೇ ವಿಷಯದ ಬಗ್ಗೆ ಹೆಚ್ಚು ವಿಚಾರ ಮಾಡುವುದು ಹಾಗು ಚಿಂತನೆ ನಡೆಸುವುದನ್ನು, ಚಿತ್ತ ಎಂದು ಹೇಳಲಾಗುತ್ತದೆ ಅಲ್ಲವೇ?

**ದಾದಾಶ್ರೀ:** ಅಲ್ಲ, ಅಲ್ಲ... ಚಿತ್ತ ಹಾಗು ಮನಸ್ಸಿಗೆ ಯಾವ ಕೊಂಡು-ತೆಗೆದುಕೊಳ್ಳುವ ವ್ಯವಹಾರವೇ ಇಲ್ಲ. ನಿಮ್ಮ ಮಾತು ಮತ್ತೊಂದು ದಿಕ್ಕಿಗೆ ಹೋಗುತ್ತಿದೆ. ಈ ಚಿತ್ತವು ಯಾವ ವಸ್ತುವಿನ ಸಂಯೋಜನೆಯಿಂದ ಉಂಟಾಗಿದೆ (composition)? ಜ್ಞಾನ-ದರ್ಶನದ ಸಂಯೋಜನೆಯಿಂದ ಚಿತ್ತವು ಉಂಟಾಗಿದೆ. ಜ್ಞಾನ ಹಾಗು ದರ್ಶನ ಎರಡು ಬೇರೆ ಬೇರೆಯಾಗಿದೆ. ಈ ಎರಡರ ಮಿಶ್ರಣವಾದಾಗ ಅಲ್ಲಿ ಅದನ್ನು ಚಿತ್ತ ಎಂದು ಕರೆಯಲಾಗುತ್ತದೆ. ಜ್ಞಾನ ಹಾಗು ದರ್ಶನದಲ್ಲಿನ ವ್ಯತ್ಯಾಸವೇನು? ನೀವು ಕಣ್ಣಿನಿಂದ ನೋಡುವುದನ್ನು ದರ್ಶನವೆಂದು ತಿಳಿಯುತಿರಲ್ಲವೇ? ಅದು ದರ್ಶನವಲ್ಲ. ದರ್ಶನವೆಂದು ಯಾವುದನ್ನು

ಹೇಳುತ್ತೇವೆ? ಜ್ಞಾನ ಹಾಗೂ ದರ್ಶನದ ನಡುವಿನ ಅಂತರವೇನು? ಎಂಬುದನ್ನು ತಿಳಿದುಕೊಳ್ಳಬೇಕಾಗಿದೆ.

ಇರುಳಿನ ಸಮಯದಲ್ಲಿ ಹೂದೋಟದಲ್ಲಿ ಕುಳಿತ್ತಿದ್ದು, ಕತ್ತಲಿನಲ್ಲಿ ಸತ್ಸಂಗದ ಮಾತುಗಳನ್ನು ಆಡುತ್ತಿರುವಾಗ, ಅಲ್ಲೇ ಹತ್ತಿರದಲ್ಲಿ ಏನೋ ಶಬ್ದವು ಕೇಳಿಸಿದರೆ, ಆಗ ಅಲ್ಲಿದ್ದವರು 'ಏನೋ ಇದೆ' ಎಂದು ಹೇಳಲು ಪ್ರಾರಂಭಿಸುತ್ತಾರೆ. ನೀವು ಕೂಡಾ, 'ಏನೋ ಇದೆ' ಎಂದು ಹೇಳಲಾರಂಭಿಸುವಿರಿ. ನಾವು ಸಹ ಹೇಳುತ್ತೇವೆ 'ಏನೋ ಇದೆ' ಎಂದು. ಈ 'ಏನೋ ಇದೆ' ಎಂಬ ಜ್ಞಾನವು ಎಲ್ಲರ ಅರಿವಿಗೆ ಬರುವುದನ್ನು 'ದರ್ಶನ'ವೆಂದು ಹೇಳಲಾಗುತ್ತದೆ. ನಂತರ ಎಲ್ಲರೂ ವಿಚಾರ ಮಾಡುತ್ತಾರೆ 'ಅದು ಏನಿರಬಹುದು?' ಎಂದು ಹಾಗು ಎಲ್ಲರೂ ಶಬ್ಧವು ಬರುತ್ತಿರುವ ಕಡೆಗೆ ಹೋಗಿ ನೋಡಿದರೆ ಅಲ್ಲಿ ಹಸುವೊಂದು ಓಡಾಡುತ್ತಿರುತ್ತದೆ. ನಾವು ನೋಡಿ, 'ಅದು ಹಸು' ಎಂದು ಹೇಳುತ್ತೇವೆ. ನೀವು ಕೂಡ ಹೇಳುತ್ತೀರ 'ಅದು ಹಸು' ಎಂದು. ಇಲ್ಲಿ ಇದನ್ನು 'ಜ್ಞಾನ'ವೆಂದು ಹೇಳಲಾಗುತ್ತದೆ. ಖಚಿತವಲ್ಲದ (Undecided) ಜ್ಞಾನವನ್ನು, 'ದರ್ಶನ'ವೆಂದು ಹೇಳಲಾಗುತ್ತದೆ ಹಾಗೂ ಖಚಿತವಾಗಿರುವ (Decided) ಜ್ಞಾನವನ್ನು, 'ಜ್ಞಾನ'ವೆಂದು ಹೇಳಲಾಗುತ್ತದೆ. ನಿಮಗೆ ಈಗ ಸಂಪೂರ್ಣವಾಗಿ ಅರ್ಥವಾಯಿತಲ್ಲವೇ?

ಜ್ಞಾನ-ದರ್ಶನ ಇವೆರಡೂ ಒಟ್ಟಿಗೆ ಸೇರಿದಾಗ, ಅದನ್ನು 'ಚಿತ್ತ' ಎನ್ನಲಾಗುತ್ತದೆ. ಜ್ಞಾನ-ದರ್ಶನವು ಅಶುದ್ಧವಾಗಿರುವವರೆಗೆ ಚಿತ್ತವು ಇರುತ್ತದೆ ಹಾಗೂ ಜ್ಞಾನ-ದರ್ಶನಗಳೆರಡೂ ಶುದ್ಧವಾದಾಗ, ಅಲ್ಲಿ 'ಆತ್ಮ' ಇದೆ. ಚಿತ್ತವು ಅಶುದ್ಧವನ್ನು ನೋಡುತ್ತದೆ ಹಾಗೂ 'ತನ್ನನ್ನು' ತಾನು ನೋಡುವುದಿಲ್ಲ! 'ಇವರು ನನ್ನ ಅತ್ತೆ, ಇವಳು ನನ್ನ ಸೊಸೆ, ಇವರು ನನ್ನ ಅಣ್ಣ' ಹೀಗೆಲ್ಲಾ ಅಶುದ್ಧವನ್ನೇ ನೋಡುತ್ತದೆ ಹಾಗಾಗಿ ಇದನ್ನು ಅಶುದ್ಧ-ಚಿತ್ತ ಎಂದು ಹೇಳಲಾಗುತ್ತದೆ. ಚಿತ್ತವು ಶುದ್ಧಿಯಾಗಿ ಬಿಟ್ಟರೆ, ಆತ್ಮಜ್ಞಾನವಾಗಿ ಬಿಡುತ್ತದೆ.

**ಪ್ರಶ್ನಕರ್ತ:** ಹಾಗಾದರೆ, 'ಪ್ರಜ್ಞಾ' ಎಂದು ಯಾವುದನ್ನು ಹೇಳುತ್ತಾರೆ?

**ದಾದಾಶ್ರೀ:** 'ಚಿತ್ತ' ಶುದ್ಧಿಯು ಸಂಪೂರ್ಣವಾದಾಗ ಅದುವೇ 'ಆತ್ಮ' ಯಾವಾಗ ಆತ್ಮ ಪ್ರಾಪ್ತಿಯಾಗುತ್ತದೆಯೋ, ಆಗ ಪ್ರಜ್ಞಾ (ಪ್ರಜ್ಞೆ) ಎನ್ನುವುದು ಪ್ರಾರಂಭವಾಗುತ್ತದೆ, ಅದು ತನ್ನಷ್ಟಕ್ಕೆ (Automatically)! 'ಆಜ್ಞಾ' ಎನ್ನುವುದೊಂದಿದೆ ಹಾಗೂ ಮತ್ತೊಂದು 'ಪ್ರಜ್ಞಾ' ಎನ್ನುವುದಿದೆ. ಆಜ್ಞಾ ಇರುವವರೆಗೆ, ಅದು ಸಂಸಾರದಿಂದ ಹೊರಬರಲು ಬಿಡುವುದಿಲ್ಲ. ಆಜ್ಞಾ ನಿರಂತರವಾಗಿ ಸಂಸಾರದ ಕಡೆಗೆಯೇ ನಿರ್ದೇಶಿಸುತಲಿರುತ್ತದೆ ಹಾಗೂ ಅದೆಂದೂ ಸಂಸಾರದಿಂದ ಹೊರಬರಲು ಬಿಡುವುದಿಲ್ಲ. ಬುದ್ಧಿ ಇರುವವರೆಗೆ, ಆಜ್ಞಾ ಇರುತ್ತದೆ. ಬುದ್ಧಿಯಿಂದ ಬಹಳಷ್ಟು

ವಿಚಾರಗಳನ್ನು ತಿಳಿಯಬಹುದಾಗಿದೆ. ಆದರೆ, ಅದರಲ್ಲಿ ಶುದ್ಧತೆಯು (Pure) ಕಾಣಸಿಗುವುದಿಲ್ಲ. ಏಕೆಂದರೆ, 'ಬುದ್ಧಿಯ' ಪ್ರಕಾಶವು ಪರೋಕ್ಷವಾಗಿದೆ (Indirect) ಹಾಗೂ 'ಜ್ಞಾನವು' ನೇರ ಪ್ರಕಾಶವಾಗಿದೆ (Direct).

ಈ ಜ್ಞಾನವನ್ನು ಪಡೆದ ನಂತರ ಪ್ರಜ್ಞಾ ಮೂಡುವುದು ಹಾಗೂ ಈ ಪ್ರಜ್ಞಾ ಎನ್ನುವುದು, ಮೋಕ್ಷವನ್ನು ಅನುಸರಿಸಿಕೊಂಡು ಹೋಗುವುದಾಗಿದೆ. ನಾವು ಒಂದು ವೇಳೆ ಬೇಡವೆಂದು ಹೇಳಿದರೂ, ಹೇಗಾದರೂ ಮಾಡಿ ಮೋಕ್ಷಕ್ಕೆ ಕರೆದುಕೊಂಡು ಹೋಗದೆ ಬಿಡುವುದಿಲ್ಲ.

ಇಲ್ಲಿ ಕುಳಿತುಕೊಂಡಿರುವಾಗ ಕೂಡ ನಿಮ್ಮ ಚಿತ್ತವು ಮನೆಗೆ ಹೋಗುತ್ತದೆ. ಆದರೆ ಮನಸ್ಸು ಮನೆಗೆ ಹೋಗುವುದಿಲ್ಲ. ಜನರು ಏನು ಹೇಳುತ್ತಾರೆ, ನಮ್ಮ ಮನಸ್ಸು ಮನೆಯಲ್ಲೇ ಇರುತ್ತದೆ, ಎಲ್ಲೆಲ್ಲೋ ಹೋಗುತ್ತದೆ ಎಂದು. ನಿಜವಾಗಿ ಅವರ ಮಾತು ಸರಿಯಲ್ಲ. ಮನಸ್ಸು ಈ ಶರೀರದಿಂದ ಎಂದೂ ಹೊರಗೆ ಹೋಗುವುದೇ ಇಲ್ಲ. ಚಿತ್ತವು ಹೊರಗೆ ಹೋಗುವುದಾಗಿದೆ. ಮನೆಯಲ್ಲಿ ಹುಡುಗ ಓದಲು ಕುಳಿತಿರುತ್ತಾನೆ, ಅವನಿಗೆ ಪೋಷಕರು ಏನು ಹೇಳುತ್ತಾರೆ? ನಿನ್ನ ಚಿತ್ತವು ಓದುವುದರ ಮೇಲೆ ಇಲ್ಲ, ನಿನ್ನ ಚಿತ್ತವು ಯಾವಾಗಲೂ ಆಟದ ಕಡೆಯೇ ಇರುತ್ತದೆ ಎಂದು. ಮನಸ್ಸಿಗೆ ಹಾಗೆಲ್ಲ ನೋಡಲು ಸಾಧ್ಯವಿಲ್ಲ. ಮನಸ್ಸು ಕಣ್ಣಿಲ್ಲದ ಕುರುಡನಂತೆ. ಸಿನಿಮಾ ನೋಡಿಕೊಂಡು ಬಂದ ಮೇಲೂ ಕೂಡಾ, ಚಿತ್ತವು ಆ ದೃಶ್ಯಗಳನ್ನು ವೀಕ್ಷಿಸಬಹುದು. ಚಿತ್ತವು ಯಾವಾಗಲೂ ಹೊರಗೆ ಅಲೆದಾಡುತ್ತಲೇ ಇರುತ್ತದೆ ಹಾಗೂ ಎಲ್ಲಿ ಸುಖವು ದೊರಕಬಹುದೆಂದು ಹುಡುಕುತ್ತಲೇ ಇರುತ್ತದೆ. ಎಲ್ಲರಿಗೂ ಎರಡು ವಸ್ತುಗಳು ತೊಂದರೆ ಕೊಡುತ್ತವೆ, ಒಂದು ಮನಸ್ಸು ಮತ್ತೊಂದು ಚಿತ್ತ.

ಮನಸ್ಸು, ಈ ಶರೀರದಿಂದ ಹೊರಗೆಹೋಗಲು ಸಾಧ್ಯವಿಲ್ಲ. ಮನಸ್ಸು ಏನಾದರೂ ಈ ಶರೀರದಿಂದ ಹೊರಗೆ ಹೋದರೆ, ಮತ್ತೆ ಜನರು ಅದನ್ನು ಒಳನುಗ್ಗಲು ಬಿಡುವುದಿಲ್ಲ. ಆದರೆ, ಅದು ಹೊರಗೆ ಬರುವುದೇ ಇಲ್ಲ. ಮನಸ್ಸು ವಿಚಾರಗಳ ಭೂಮಿಕೆಯಾಗಿದೆ. ಅದು ವಿಚಾರ ಮಾಡುವುದನ್ನು ಬಿಟ್ಟು ಬೇರೇನೂ ಕೆಲಸ ಮಾಡುವುದಿಲ್ಲ. ಕೇವಲ ವಿಚಾರ ಮಾಡುತ್ತಲೇ ಇರುತ್ತದೆ. ಎಲ್ಲಾ ಕಡೆಯು ಅಲೆಯುವುದು, ಹೊರಗೆ ತಿರುಗಾಡುವುದು, ಅದೆಲ್ಲಾ ಈ ಚಿತ್ತವು ಮಾಡುತ್ತದೆ. ಈಗಿಲ್ಲಿ ಕುಳಿತುಕೊಂಡಿರುವಾಗಲೇ ಚಿತ್ತವು ಇಲ್ಲಿಂದ ಮನೆಗೆ ಹೋಗಿ ಮೇಜು, ಕುರ್ಚಿ, ಕಪಾಟು ಎಲ್ಲವನ್ನು ನೋಡುತ್ತದೆ. ಹಾಗೆ ಮನೆಯಲ್ಲಿ ಇರುವ ಮಗ, ಮಗಳು, ಹೆಂಡತಿ ಎಲ್ಲರನ್ನೂ ನೋಡುತ್ತದೆ. ಪೇಟೆಯಲ್ಲಿ ಏನಾದರು ನೋಡಿದ್ದನ್ನು ಕೊಂಡುಕೊಳ್ಳಬೇಕೆಂಬ

ವಿಚಾರವನ್ನು ಮಾಡುತ್ತಿರುವಾಗಲೇ, ಚಿತ್ತವು ಅಲ್ಲಿಗೆ ಹೋಗಿಬಿಡುತ್ತದೆ. ಎಲ್ಲವನ್ನು ನೋಡುವುದನ್ನು 'ಚಿತ್ತ'ವೆಂದು ಕರೆಯಲಾಗುತ್ತದೆ, ಆದರೆ ಅದು ಅಶುದ್ಧ ಚಿತ್ತವಾಗಿದೆ. ಅದು ಶುದ್ಧವಾಗಿ ಬಿಟ್ಟರೆ ಎಲ್ಲಾ ಕಾಮನೆಗಳು ಪೂರ್ಣಗೊಂಡು, 'ಸಚ್ಚಿದಾನಂದ' ಸ್ವರೂಪವಾಗಿಬಿಡುತ್ತದೆ.

ಸಚ್ಚಿದಾನಂದ ಅನ್ನುವುದು ಎಲ್ಲದರ ಸಾರವಾಗಿದೆ(extract). ಯಾವ ಆತ್ಮ ಅನ್ನುವುದಿದೆಯೋ ಅದು ಸಚ್ಚಿದಾನಂದವೇ ಆಗಿದೆ ಹಾಗೂ ಭಗವಂತ ಎಂದು ಯಾವುದನ್ನು ಹೇಳುತ್ತೇವೋ ಅದೂ ಸಹ ಸಚ್ಚಿದಾನಂದವೇ ಆಗಿದೆ. 'ಸಚ್ಚಿದಾನಂದ' ಎನ್ನುವಲ್ಲಿ 'ಸತ್' ಇದೆ. ಮನುಷ್ಯನು ಯಾವ ಜಗತ್ತಿನ ವಸ್ತುಗಳನ್ನು ಪಂಚೇಂದ್ರಿಯಗಳಿಂದ ನೋಡುತ್ತಾನೋ, ಅದು ಸತ್ ಅಲ್ಲ. ಯಾವುದು ಶಾಶ್ವತವಾಗಿದೆಯೋ (Permanent) ಅದನ್ನು 'ಸತ್' ಎಂದು ಹೇಳುತ್ತಾರೆ. ಈ ಎಲ್ಲಾ 'Relative'ಗಳು ತಾತ್ಕಾಲಿಕ ಹೊಂದಾಣಿಕೆಗಳಾಗಿವೆ (All This Relative are Temporary Adjustment) ಯಾವುದು Temporary ಇದೆಯೋ, ಅದನ್ನು ಸತ್ ಎಂದು ಹೇಳಲಾಗುವುದಿಲ್ಲ. ಚಿತ್ತ ಎಂದರೆ ಜ್ಞಾನ-ದರ್ಶನ; ಸತ್-ಚಿತ್ತ ಅಂದರೆ ನಿಜವಾದ ಜ್ಞಾನ ಹಾಗು ನಿಜವಾದ ದರ್ಶನವಾಗಿದೆ (Right Gnan and Right Darshan). ಯಾರು 'Temporary'ಯನ್ನು ನೋಡುತ್ತಾರೋ, ಅದು ಅಶುದ್ಧ ಜ್ಞಾನ ಹಾಗು ಅಶುದ್ಧ ದರ್ಶನವಾಗಿದೆ, ಅಂದರೆ ಅಶುದ್ಧ ಚಿತ್ತವಾಗಿದೆ. ಚಿತ್ತ ಶುದ್ಧಿಯಾದರೆ ಕೆಲಸವಾದಂತೆ. ಚಿತ್ತ ಶುದ್ಧಿ ಆಯಿತೆಂದರೆ, ಅದನ್ನೇ ಸತ್-ಚಿತ್ತವೆಂದು ಹೇಳಲಾಗುತ್ತದೆ; ಆ 'ಸತ್-ಚಿತ್ತ'ದಿಂದಾಗಿ 'ಆನಂದ'ವು ಉಂಟಾಗುತ್ತದೆ.

**ಪ್ರಶ್ನಕರ್ತ:** ಹಾಗಾದರೆ ಆನಂದದ ವ್ಯಾಖ್ಯಾನವೇನು?

**ದಾದಾಶ್ರೀ:** ಜಗತ್ತಿನಲ್ಲಿನ ಸತ್ಯವೇನಿದೆ ಅದು 'ಸತ್' ಅಲ್ಲ. ವ್ಯವಹಾರದಲ್ಲಿ ನಡೆಯುವುದು ಲೌಕಿಕ ಸತ್ಯವಾಗಿದೆ. ವಾಸ್ತವಿಕತೆಯು ಅಲೌಕಿಕ ವಸ್ತುವಾಗಿದೆ. ಲೌಕಿಕದಲ್ಲಿ ವಾಸ್ತವಿಕತೆ ಇರುವುದಿಲ್ಲ. ವಾಸ್ತವಿಕತೆ ಎನ್ನುವುದು 'ಸತ್', ಅದು ಸತ್ಯವಲ್ಲ. 'ಸತ್' ಎಂದು ಯಾವುದನ್ನು ಹೇಳಲಾಗುತ್ತದೆಂದರೆ ಯಾವ ವಸ್ತು ನಿರಂತರವಾಗಿ ಹಾಗೂ ನಿತ್ಯವಾಗಿ ಇರುವುದೋ ಅದನ್ನು 'ಸತ್' ಎಂದು ಹೇಳಲಾಗುತ್ತದೆ. ಅನಿತ್ಯವನ್ನು ಸತ್ಯವೆಂದು ಹೇಳುತ್ತಾರೆ. ಜಗತ್ತಿನಲ್ಲಿನ ಸತ್ಯ-ಅಸತ್ಯವು ಸಾಪೇಕ್ಷವಾಗಿದೆ. ನಿಮಗೆ ಯಾವುದು ಸತ್ಯ ಅನ್ನಿಸುತ್ತದೆಯೋ, ಅದು ಮತ್ತೊಬ್ಬರಿಗೆ ಅಸತ್ಯ ಎನ್ನಿಸಬಹುದು. ಆದರೆ, ಈ 'ಸತ್' ಎನ್ನುವುದು ಎಂದೂ ಬದಲಾಗುವುದೇ ಇಲ್ಲ. 'ಸತ್'

ಎಂದರೆ ಶಾಶ್ವತ (Permanent)! ಚಿತ್ತ ಎಂದರೆ ಜ್ಞಾನ-ದರ್ಶನವಾಗಿದೆ. ಜ್ಞಾನ-ದರ್ಶನವು ಒಂದುಗೂಡಿದರೆ, ಚಿತ್ತವೆಂದು ಹೇಳಲಾಗುತ್ತದೆ. ಶಾಶ್ವತವಾದ (Permanent) ಜ್ಞಾನ-ದರ್ಶನದಿಂದ ಉಂಟಾಗುವುದರ ಫಲವೇನು? ಅದುವೇ, ಆನಂದ! ಶಾಶ್ವತವಾದ ಜ್ಞಾನ-ದರ್ಶನವನ್ನು ಏನೆಂದು ಹೇಳುತ್ತಾರೆ? ಅದುವೇ, 'ಕೇವಲಜ್ಞಾನ-ದರ್ಶನ (Absolute)!'

## ಬುದ್ಧಿಯ ವಿಜ್ಞಾನ

**ದಾದಾಶ್ರೀ:** ನಿಮಗೆ, ಬುದ್ಧಿ ಅನ್ನುವುದು ಇದೆಯೇ?

**ಪ್ರಶ್ನಕರ್ತ:** ಬಹಳ ಕಡಿಮೆ ಇದೆ.

**ದಾದಾಶ್ರೀ:** ಹೆಚ್ಚಿನ ಬುದ್ಧಿಯು ಇಲ್ಲವಾದರೆ, ನಿಮಗೆ ಹೇಗೆ ಕೆಲಸ ಮಾಡಲಾಗುತ್ತದೆ? ಬುದ್ಧಿಯು ಇಲ್ಲವಾದರೆ ಯಾವ ಕೆಲಸವನ್ನು ಮಾಡಲಾಗುವುದಿಲ್ಲ. ಬುದ್ಧಿಯ ಪ್ರಕಾಶದಿಂದ, ಈ ಸಂಸಾರವನ್ನು ನಡೆಸುವುದಾಗಿದೆ. ಸಂಸಾರದಲ್ಲಿ ಇದು ನಿರ್ಣಯ (Decision) ತೆಗೆದುಕೊಳ್ಳುವುದಕ್ಕಾಗಿಯೇ ಇರುವುದಾಗಿದೆ. ಬುದ್ಧಿಯು ಇದ್ದರೆ ಮಾತ್ರ ನಿರ್ಣಯ (Decision) ತೆಗೆದುಕೊಳ್ಳಲಾಗುತ್ತದೆ. ನೀವು ಹೇಗೆ ನಿರ್ಣಯವನ್ನು ತೆಗೆದುಕೊಳ್ಳುತ್ತೀರಾ?

**ಪ್ರಶ್ನಕರ್ತ:** ಎಷ್ಟೋ ಅಲ್ಪ ಸ್ವಲ್ಪ ಬುದ್ಧಿಯಿಂದ ಕೆಲಸವಾಗುತ್ತಿದೆ, ಅದರಿಂದಲೇ ನಡೆಸಿಕೊಂಡು ಹೋಗುತ್ತಿದ್ದೇನೆ.

**ದಾದಾಶ್ರೀ:** ನಿಮಗಿಂತ ಹೆಚ್ಚಿನ ಬುದ್ಧಿಶಾಲಿಗಳು ಯಾರಾದರೂ ಇದ್ದಾರೆಯೇ?

**ಪ್ರಶ್ನಕರ್ತ:** ಪ್ರಪಂಚದಲ್ಲಿ ಬಹಳ ಮಂದಿ ಇರಬಹುದು. ಅವರು ಯಾರೆಂಬುದು, ನನಗೆ ಗೊತ್ತಿಲ್ಲ.

**ದಾದಾಶ್ರೀ:** ಸಂಪೂರ್ಣ ಬುದ್ಧಿಯೇ ಇಲ್ಲದಿರುವಂಥವರನ್ನು ಯಾರನ್ನಾದರೂ ನೋಡಿದ್ದೀರಾ?

**ಪ್ರಶ್ನಕರ್ತ:** ನಾನು, ಸಂಪೂರ್ಣ ಬುದ್ಧಿಯೇ ಇಲ್ಲದಿರುವಂಥವರನ್ನು ಯಾರನ್ನೂ ನೋಡಿಲ್ಲ. ಏಕೆಂದರೆ ಎಷ್ಟೆಲ್ಲಾ ಪ್ರಾಣಿಗಳಿವೆಯೋ, ಅವುಗಳಿಗೂ ಅವುಗಳ ಶ್ರೇಣಿಗೆ (grade) ತಕ್ಕಂತೆ ಅಲ್ಪಮಟ್ಟಿಗಿನ ಬುದ್ಧಿಯು ಇದ್ದೇ ಇರುತ್ತದೆ.

**ದಾದಾಶ್ರೀ:** ನಮ್ಮಲ್ಲಿ (ಜ್ಞಾನಿಗಳಲ್ಲಿ) ಬುದ್ಧಿ ಸುತರಾಂ (ಪೂರ್ತಿಯಾಗಿ) ಇಲ್ಲವೇ ಇಲ್ಲ. ನಾವು ಅಬುದ್ಧರು.

**ಪ್ರಶ್ನಕರ್ತ:** ಹೌದು, ಇದು ನಿಜವಾದ ಮಾತು. ಹಾಗಾಗಲು ಸಾಧ್ಯವಾಗುತ್ತದೆ, ಯಾವಾಗ ಅಬುದ್ಧದ ಸೀಮೆಯನ್ನು (limit) ತಲುಪಲಾಗುತ್ತದೆಯೋ, ಆಗ ಮನುಷ್ಯನು ಸ್ವಯಂ 'ಬುದ್ಧ'ನಾಗಿಬಿಡುತ್ತಾನೆ!

**ದಾದಾಶ್ರೀ:** ಹೌದು, ಸ್ವಯಂ 'ಬುದ್ಧ' ಆಗಿಬಿಡುತ್ತಾರೆ. ಅಬುದ್ಧನಾದ ಮೇಲೆ ಜ್ಞಾನವು ಪ್ರಕಾಶವಾಗುತ್ತದೆ. ಎಲ್ಲಿಯವರೆಗೆ ಬುದ್ಧಿ ಇರುತ್ತದೆಯೋ, ಅಲ್ಲಿಯವರೆಗೆ ಶೇಕಡಾ ಒಂದು ಅಂಶದಷ್ಟೂ (percent) ಜ್ಞಾನ ಸಹ ಇರಲು ಸಾಧ್ಯವಿಲ್ಲ. ಜ್ಞಾನ ಇರುವಲ್ಲಿ, ಬುದ್ಧಿಯು ಇರುವುದಿಲ್ಲ. ನಮಗೆ ಯಾವಾಗ ಜ್ಞಾನ ಪ್ರಾಪ್ತಿಯಾಯಿತೋ, ಅದರ ನಂತರದಿಂದ ಬುದ್ಧಿಯು ಸಂಪೂರ್ಣವಾಗಿ ಅಂತ್ಯಗೊಂಡು ಬಿಟ್ಟಿದೆ.

ನೀವು ತುಂಬಾ ಬುದ್ಧಿ ಉಳ್ಳವರಾಗಿದ್ದು, ನಿಮ್ಮ ಹೆಂಡತಿಯೊಂದಿಗೆ ರಸ್ತೆಯಲ್ಲಿ ಹೋಗುವಾಗ ಅವಳು ಹಣವನ್ನು ದಾರಿಯಲ್ಲಿ ಬೀಳಿಸಿಕೊಂಡು ಬರುವುದನ್ನು ಕಂಡು ನೀವು ಭಾವಾವೇಶಕ್ಕೆ (emotional) ಒಳಗಾಗುತ್ತೀರಿ. ಇಲ್ಲಿ ಬುದ್ಧಿಯು ಭಾವಾವೇಶಕ್ಕೆ ಒಳಗಾಗುವಂತೆ ಮಾಡುತ್ತದೆ. ಎಲ್ಲಿಯವರೆಗೆ ಅಹಂಕಾರವಿದೆಯೋ ಅಲ್ಲಿಯವರೆಗೆ ಬುದ್ಧಿಯು ಇರುತ್ತದೆ. ನಿಮಗೆ ಬುದ್ಧಿ ಇಲ್ಲ, ಎಂದ ಮಾತ್ರಕ್ಕೆ ನಡೆಯುತ್ತದೆಯೇ?

**ಪ್ರಶ್ನಕರ್ತ:** ಹೆಚ್ಚಿನ ಬುದ್ಧಿ ಇಲ್ಲ, ಸ್ವಲ್ಪ ಬುದ್ಧಿ ಇದೆ.

**ದಾದಾಶ್ರೀ:** ಸ್ವಲ್ಪ ಬುದ್ಧಿ, ಆದರೆ, ಅದೇ ಅತಿಯಾದ ಬುದ್ಧಿಯಾಗಿದೆ. ಈ ಕಾಲದಲ್ಲಿ ಸಮ್ಯಕ್ ಬುದ್ಧಿಯು ಕಡಿಮೆ ಹಾಗು ವಿಪರೀತದ ಬುದ್ಧಿಯೇ ಹೆಚ್ಚಾಗಿದೆ. ಇಡೀ ವಿಶ್ವದಲ್ಲಿನ ಸಣ್ಣ ಮಕ್ಕಳಲ್ಲಿ ಕೂಡಾ ಬುದ್ಧಿಯಿದೆ, ಯಾರದೋ ಹಣ ರಸ್ತೆಯಲ್ಲಿ ಬಿದ್ದಿದ್ದರೆ ಅದನ್ನು ತೆಗೆದುಕೊಂಡು ಬಿಡುತ್ತಾರೆ. ಅದೇನು ಬುದ್ಧಿ ಅಲ್ಲವೇ? ಇದೆಲ್ಲಾ ವಿಪರೀತದ ಬುದ್ಧಿಯಿಂದಾಗಿದೆ. ಸಮ್ಯಕ್ ಬುದ್ಧಿಯು, ನಮ್ಮ ಬಳಿ ಬಂದು ಕುಳಿತುಕೊಳ್ಳುವುದರಿಂದ ಸಾಧ್ಯವಾಗುತ್ತದೆ.

ಒಬ್ಬ ವ್ಯಕ್ತಿಯು ನಮ್ಮನ್ನು ಕೇಳಿದರು ಏನೆಂದರೆ, 'ಜಗತ್ತಿನಲ್ಲಿ ಬೇರೆ ಯಾರಲ್ಲಿಯೂ ಜ್ಞಾನ ಇಲ್ಲವೆ? ನಿಮ್ಮ ಹತ್ತಿರ ಮಾತ್ರ ಇರುವುದೆ?' ಆಗ ನಾವು ಹೇಳಿದೆವು, 'ಇಲ್ಲ, ಯಾರ ಬಳಿ ಜ್ಞಾನವಿದೆಯೋ, ಅದು subject ಜ್ಞಾನವಾಗಿದೆ, ಅದು ಬುದ್ಧಿಯ ಜ್ಞಾನವಾಗಿದೆ. ಬುದ್ಧಿಯ ಸಂಪರ್ಕದ ಪ್ರಪಂಚದಲ್ಲಿನ ಎಲ್ಲಾ ವಿಷಯಗಳನ್ನು ತಿಳಿದಿರಬಹುದು. ಆದರೆ, ಅದು ಅಹಂಕಾರಿ ಜ್ಞಾನವಾಗಿದೆ.' ಅದು ಅವರ ಬುದ್ಧಿಯೊಂದಿಗೆ ಸಮಾವೇಶಗೊಂಡಿರುತ್ತದೆ. ಆದರೆ ನಿರಹಂಕಾರಿ ಜ್ಞಾನವೇ, ನಿಜವಾದ ಜ್ಞಾನವಾಗಿದೆ. 'ನಾನು ಯಾರು?' ಎನ್ನುವುದೊಂದ್ದನ್ನಷ್ಟೇ ಯಾರು

ತಿಳಿದಿದ್ದಾರೋ, ಅವರೇ ಜ್ಞಾನಿಗಳು. ಜಪ, ತಪ, ತ್ಯಾಗ ಎಲ್ಲಾ subject ಆಗಿದೆ, ವಿಷಯಗಳಾಗಿವೆ. ವಿಷಯದಿಂದ ಎಂದೂ ನಿರ್ವಿಷಯವಾದ ಆತ್ಮವನ್ನು ಪ್ರಾಪ್ತಿಮಾಡಿಕೊಳ್ಳಲು ಸಾಧ್ಯವಿಲ್ಲ.

**ಪ್ರಶ್ನಕರ್ತ:** ಸಿದ್ಧಿ ಪ್ರಾಪ್ತಿಯನ್ನು ಯಾರು ಮಾಡಿಕೊಳ್ಳುವರೋ, ಅದು ಕೂಡಾ ವಿಷಯಾಸಕ್ತಿಯೇ?

**ದಾದಾಶ್ರೀ:** ಅದೆಲ್ಲಾ ವಿಷಯಾಸಕ್ತಿಯೇ ಆಗಿದೆ. ಹಾಗೂ ಅವೆಲ್ಲಾ ವಿಷಯಗಳ (subject) ಜ್ಞಾನವಾಗಿವೆ ಮತ್ತು ವಿಷಯಗಳ ಆರಾಧನೆಯನ್ನು ಮಾಡುವುದರಿಂದ ಮೋಕ್ಷವು ಸಿಗುವುದಿಲ್ಲ. ನಿಮ್ಮಲ್ಲಿಯೂ ಬುದ್ಧಿಯಿದೆ, ಜಗತ್ತಿನಲ್ಲಿ ಎಲ್ಲರ ಬಳಿಯೂ ಬುದ್ಧಿಯಿದೆ. ಆದರೆ ನಾವು (ಜ್ಞಾನಿಗಳು) ಮಾತ್ರ ಅಬುದ್ಧರಾಗಿದ್ದೇವೆ. ಬುದ್ಧಿಯು ಮನುಷ್ಯನಿಗೆ ಏನು ಮಾಡುತ್ತದೆ? ಅದು Emotional ಮಾಡಿಬಿಡುತ್ತದೆ. ಹೇಗೆ ರೈಲುಬಂಡಿಯು ಗತಿಯಿಂದ (Motion) ಚಲಿಸುತ್ತಾ ಇರುವಾಗ, ಎಲ್ಲಿಯಾದರು Emotional ಆಗಿಬಿಟ್ಟರೆ, ಆಗ ಏನಾಗುತ್ತದೆ?

**ಪ್ರಶ್ನಕರ್ತ:** ಎಲ್ಲಾ ಅವ್ಯವಸ್ಥೆಯಾಗಿಬಿಡುತ್ತದೆ.

**ದಾದಾಶ್ರೀ:** ಹಾಗೆಯೇ ಮನುಷ್ಯನು Emotional ಆಗಿಬಿಟ್ಟರೆ, ಆಗ ಶರೀರದೊಳಗೆ ಎಷ್ಟೆಲ್ಲಾ ಜೀವಿಗಳಿವೆಯೋ, ಅವೆಲ್ಲವೂ ಮರಣಹೊಂದುತ್ತವೆ. ಇದರಿಂದಾಗಿ ಅದರ ದೋಷವು ಅಂಟಿಕೊಳ್ಳುತ್ತದೆ. ಆದುದರಿಂದ ನಾವು (ಜ್ಞಾನಿಗಳು) ಗತಿಯಲ್ಲಿಯೇ ಇರುತ್ತೇವೆ, ನಾವು ಎಂದೂ Emotional ಆಗುವುದಿಲ್ಲ. ನಿಮಗೆ ಗತಿಯಲ್ಲಿ ಇರಬೇಕೆಂಬ ಇಚ್ಛೆ ಇದೆಯೋ, ಇಲ್ಲ Emotional..?

**ಪ್ರಶ್ನಕರ್ತ:** ಗತಿಯಲ್ಲಿ ಇರಬೇಕೆಂಬ ಇಚ್ಛೆ ಇದೆ.

**ದಾದಾಶ್ರೀ:** ಮನುಷ್ಯನ ಬುದ್ಧಿಯು ಏನನ್ನು ಹೇಳುತ್ತದೆ? ಲಾಭ ಹಾಗು ನಷ್ಟ, ಇವೆರಡನ್ನು ಬುದ್ಧಿಯು ಹೇಳುತ್ತದೆ. ಅದುಬಿಟ್ಟು ಬೇರೆನ್ನನ್ನು ಹೇಳುವುದಿಲ್ಲ.

ರೈಲುಗಾಡಿಯ ಒಳಗೆ ಹೋಗಲು ಕಾಲಿಡುವಾಗಲೇ, ಬುದ್ಧಿಯು ತೋರಿಸುತ್ತದೆ 'ಎಲ್ಲಿ ಸರಿಯಾದ ಜಾಗ ಇದೆ ಹಾಗು ಎಲ್ಲಿ ಇಲ್ಲ' ಎಂದು. ಬುದ್ಧಿಯ ಕೆಲಸವೇ ಲಾಭ-ನಷ್ಟಗಳನ್ನು ತೋರಿಸುವುದಾಗಿದೆ. ನಮ್ಮಲ್ಲಿ (ಜ್ಞಾನಿಯಲ್ಲಿ) ಸುತರಾಂ ಬುದ್ಧಿಯು ಇಲ್ಲವೇ ಇಲ್ಲ, ಹಾಗಾಗಿ, ನಮಗೆ ಲಾಭ-ನಷ್ಟಗಳು ಎಲ್ಲಿಯೂ ಅನ್ನಿಸುವುದೇ ಇಲ್ಲ. ಇದು ಒಳ್ಳೆದು, ಇದು ಕೆಟ್ಟದು, ಎಂದು ಅನ್ನಿಸುವುದೇ ಇಲ್ಲ. ದೊಡ್ಡ-ದೊಡ್ಡ ಬಂಗಲೆಗಳಲ್ಲಿ ವಾಸವಾಗಿರುವ ಜನರು ನಮ್ಮಲ್ಲಿಗೆ

ಬಂದಾಗ, ನಮ್ಮನ್ನು ಕೇಳುತ್ತಾರೆ 'ನಿಮ್ಮ ದೃಷ್ಟಿಯಲ್ಲಿ ನಮ್ಮ ಬಂಗಲೆ ಹೇಗಿದೆ?' ಎಂದು. ಆಗ ನಾವು ಹೇಳುತ್ತೇವೆ, 'ನನಗೆ ನಿಮ್ಮ ಬಂಗಲೆ ಎಂದೂ ಚೆನ್ನಾಗಿದೆಯೆಂದು ಅನ್ನಿಸುವುದಿಲ್ಲ. ಏಕೆಂದರೆ, ಯಾವ ಬಂಗಲೆಯನ್ನು ಇಲ್ಲೇ ಬಿಟ್ಟುಹೋಗಬೇಕಾಗಿದೆಯೋ, ಅದರ ಒಳಿತು-ಕೆಡಕುಗಳನ್ನು ಏನು ನೋಡುವುದು? ಈ ಬಂಗಲೆಯಿಂದಲೇ ಕೊನೆಗೆ, ಎಲ್ಲವನ್ನು ಬಿಟ್ಟು ಹೊರಡಬೇಕು.'

ಬುದ್ಧಿಯು ಪರ-ಪ್ರಕಾಶವಾಗಿದೆ ಮತ್ತು ಆತ್ಮ, ಸ್ವ-ಪರ ಪ್ರಕಾಶವಾಗಿದೆ. ಬುದ್ಧಿ ಹಾಗು ಜ್ಞಾನ ಎರಡೂ ವಿಭಿನ್ನ ವಿಚಾರಗಳಾಗಿವೆ. ನಿಮ್ಮ ಬಳಿ ಜ್ಞಾನ ಇದೆಯೋ ಅಥವಾ ಬುದ್ಧಿ ಇದೆಯೋ?

**ಪ್ರಶ್ನಕರ್ತ:** ಬುದ್ಧಿ ಅಂತೂ ಇದೇ, ಜ್ಞಾನದ ವಿಷಯದಲ್ಲಿ ಇನ್ನು ಅಲ್ಲಿಯವರೆಗೆ ತಲುಪಿಲ್ಲ.

**ದಾದಾಶ್ರೀ:** ಬುದ್ಧಿ ಇರುವಲ್ಲಿ ಜ್ಞಾನ ಇರುವುದಿಲ್ಲ.

**ಪ್ರಶ್ನಕರ್ತ:** ಆದುದರಿಂದಲೇ ಜ್ಞಾನದಲ್ಲಿ ಮುಂದೆ ಹೋಗಬೇಕೆಂದು ಪ್ರಯತ್ನಿಸುತ್ತಿದ್ದೇನೆ.

**ದಾದಾಶ್ರೀ:** ಹಾಗಲ್ಲ, ಜ್ಞಾನದಲ್ಲಿ ಪ್ರಯತ್ನ ಮಾಡಬೇಕಾದ ಅವಶ್ಯಕತೆಯೇ ಇಲ್ಲ. ಅದು ಸಹಜವಾಗಿಯೇ ಉಂಟಾಗುತ್ತದೆ, ಪ್ರಯತ್ನಿಸಬೇಕೆಂಬುದು ಇಲ್ಲ.

**ಪ್ರಶ್ನಕರ್ತ:** ಜ್ಞಾನದ ಮಾತುಗಳನ್ನು ಬುದ್ಧಿಯಿಂದ ಅರ್ಥ ಮಾಡಿಕೊಳ್ಳಲು ಹೋಗಬಾರದು, ಯಾಕೆ ಹಾಗೆ?

**ದಾದಾಶ್ರೀ:** ಹೌದು, ಈ ಮಾತುಗಳು ಬುದ್ಧಿಗೆ ಎಟಕುವಂತಹದಲ್ಲ. ಬುದ್ಧಿಯು ಯಾರ ಬಳಿಯೂ ಸಂಪೂರ್ಣವಾಗಿ ಇರುವುದಿಲ್ಲ, ಯಾರು ಅಬುದ್ಧರಾಗಿದ್ದಾರೆ, ಅವರಿಂದ ಮಾತ್ರ ಇದರ ಬಗ್ಗೆ ತಿಳಿಯಲು ಸಿಗುತ್ತದೆ. ಈ ಜಗತ್ತಿನಲ್ಲಿ ಎಲ್ಲಿಯಾದರು ಅಬುದ್ಧ ವ್ಯಕ್ತಿಯನ್ನು ಎಂದಾದರೂ ನೋಡಿದ್ದೀರಾ? ಎಲ್ಲಾ ಬುದ್ಧಿವಂತರೇ ಕಾಣಸಿಗುತ್ತಾರೆ ಅಲ್ಲವೇ? ಈ ಜಗತ್ತಿನಲ್ಲಿ ನಾವು (ಜ್ಞಾನಿಗಳು) ಒಬ್ಬರೇ ಅಬುದ್ಧರು. ನಮ್ಮೊಳಗೆ ಬುದ್ಧಿ ಸಂಪೂರ್ಣ ಇಲ್ಲವೇ ಇಲ್ಲ, ನಮ್ಮ ಬಳಿ ಜ್ಞಾನವಿದೆ. ಜ್ಞಾನ ಹಾಗು ಬುದ್ಧಿಯಲ್ಲಿ ಏನು ವ್ಯತ್ಯಾಸ (difference)? ಬುದ್ಧಿಯು ಪರೋಕ್ಷವಾದ (Indirect) ಪ್ರಕಾಶವಾಗಿದೆ ಮತ್ತು ಜ್ಞಾನವು ನೇರವಾದ (Direct) ಪ್ರಕಾಶವಾಗಿದೆ. ಈ ಎರಡು ಪ್ರಕಾಶಗಳು ವಸ್ತುಗಳಾಗಿವೆ, ಹಾಗಾಗಿ ಇವೆರಡರಲ್ಲಿ ಒಂದನ್ನು ಅಂದರೆ, ನೇರವಾದ ಪ್ರಕಾಶವನ್ನು ನಾವು ಇಟ್ಟುಕೊಂಡಿದ್ದೇವೆ ಮತ್ತು ಪರೋಕ್ಷವಾದ ಪ್ರಕಾಶವು ನಮಗೆ

ಬೇಡವಾಗಿದೆ. ಯಾರ ಬಳಿಯಲ್ಲಿ ನೇರವಾದ ಪ್ರಕಾಶವಿಲ್ಲವೋ, ಅಂಥವರಿಗೆ ಪರೋಕ್ಷವಾದ ಪ್ರಕಾಶವು ಬೇಕಾಗುತ್ತದೆ. ಅದಕ್ಕಾಗಿ ಅವರು ಮೇಣದಬತ್ತಿಯನ್ನು ಇಟ್ಟುಕೊಳ್ಳುತ್ತಾರೆ. ಆದರೆ ನೇರವಾಗಿ ಪ್ರಕಾಶವು ಸಿಗುವಾಗ ಮೇಣದಬತ್ತಿಯ (ಬುದ್ಧಿಯ) ಅವಶ್ಯಕತೆ ಏನಿದೆ? ಆತ್ಮ ಪ್ರಾಪ್ತಿಯಾದ ಬಳಿಕ ಬುದ್ಧಿಯು ಯಾಕೆ ಬೇಕು? ಇಡೀ ಜಗತ್ತಿನ ಜನರ ಬಳಿ ಮೇಣದಬತ್ತಿ ಇದೆ, ನಮ್ಮ ಬಳಿ ಮೇಣದಬತ್ತಿ ಇಲ್ಲ ಅರ್ಥಾತ್ ನಮ್ಮ ಹತ್ತಿರ ಬುದ್ಧಿ ಇಲ್ಲ.

ಯಾವುದು ಪರೋಕ್ಷವಾದ ಪ್ರಕಾಶವಾಗಿದೆ ಎನ್ನುವುದನ್ನು ನಿಮಗೊಂದು ಉದಾಹರಣೆಯಿಂದ ತಿಳಿಸಿಕೊಡುತ್ತೇನೆ, ಈ ಸೂರ್ಯನಾರಾಯಣನ ಪ್ರಕಾಶವು ಕನ್ನಡಿಯ ಮೇಲೆ ನೇರವಾಗಿ ಬಿದ್ದು, ನಂತರ ಆ ಕನ್ನಡಿಯಿಂದ ಪ್ರಕಾಶವು ನಿಮ್ಮ ಅಡಿಗೆ ಮನೆಯೊಳಗೆ ಬರುತ್ತದೆ. ಅಡಿಗೆ ಮನೆಗೆ ಕನ್ನಡಿಯಿಂದ ಬರುವ ಪ್ರಕಾಶವನ್ನು ಪರೋಕ್ಷವಾದ ಪ್ರಕಾಶವೆಂದು ಹೇಳಲಾಗುತ್ತದೆ. ಹೀಗೆ ಎಲ್ಲರಲ್ಲಿ 'ಬುದ್ಧಿ' ಪರೋಕ್ಷವಾದ ಪ್ರಕಾಶವಾಗಿದೆ ಹಾಗೂ 'ಜ್ಞಾನ' ಸೂರ್ಯನಿಂದ ಕನ್ನಡಿಯ ಮೇಲೆ ಬೀಳುವಂತಹ ನೇರವಾದ ಪ್ರಕಾಶವಾಗಿದೆ

ಸೂರ್ಯನ ಪ್ರಕಾಶವು ಕನ್ನಡಿಯ ಮಾಧ್ಯಮದ ಮೂಲಕ (medium through) ಹೊರಗೆ ಬೀಳುತ್ತದೆ. ಇಲ್ಲಿ ಮಾಧ್ಯಮವು ಕನ್ನಡಿಯಾಗಿದೆ. ಹಾಗೆಯೇ ಆತ್ಮ ಪ್ರಕಾಶವು ಅಹಂಕಾರದ ಮಾಧ್ಯಮದ ಮೂಲಕ ಹೊರಬೀಳುತ್ತದೆ, ಅದುವೇ 'ಬುದ್ಧಿ' ಆಗಿದೆ. ಅಹಂಕಾರ ಹೇಗಿರುತ್ತದೋ, ಅದರಂತೆ ಬುದ್ಧಿ ಇರುತ್ತದೆ.

**ಪ್ರಶ್ನಕರ್ತ:** 'ನಾನು' ಎಂದು ಕರೆದುಕೊಳ್ಳುವ, ಆ 'ನಾನು' ಎನ್ನುವುದನ್ನು ಅಹಂಕಾರ ಎಂದು ಹೇಳುತ್ತಾರೆ ಅಲ್ಲವೇ?

**ದಾದಾಶ್ರೀ:** ಹೌದು, ಆ 'ನಾನು' ಎಂಬ ಅಹಂಕಾರ ಇರುವಲ್ಲಿ 'ಬುದ್ಧಿ' ಇದೆ. ಹಾಗೂ 'ನಾನು' ಎಂಬ ಅಹಂಕಾರ ಇಲ್ಲವಾದಾಗ ಅಲ್ಲಿ ಜ್ಞಾನವಿದೆ, ನೇರ ಪ್ರಕಾಶವಿದೆ. ನಮ್ಮಲ್ಲಿ (ಜ್ಞಾನಿಗಳಲ್ಲಿ) ಬುದ್ಧಿ ಇಲ್ಲ ಹಾಗು 'ನಾನು' ಎಂಬ ಅಹಂಕಾರವೂ ಇಲ್ಲ. ನಮ್ಮೊಳಗೆ ಯಾವ ಪ್ರಕಾರದ ಅಹಂಕಾರವೂ ಇಲ್ಲ. ದೊಡ್ಡ ದೊಡ್ಡ ಮಹಾತ್ಮರಿಗೆಲ್ಲಾ 'ನಾನು, ನಾನು, ನಾನು' ಎನ್ನುವುದು ಇರುತ್ತದೆ.

**ಪ್ರಶ್ನಕರ್ತ:** ಹಾಗಿದ್ದರೆ ಅವರು ಹೇಗೆ ದೊಡ್ಡವರಾಗುತ್ತಾರೆ? ಯಾರಿಗೆ 'ನಾನು, ನಾನು, ನಾನು' ಎನ್ನುವುದು ಇರುತ್ತದೆಯೋ, ಅವರು ದೊಡ್ಡವರೆಂದು ಹೇಗೆ ಎನ್ನಿಸಿಕೊಳ್ಳುತ್ತಾರೆ?

**ದಾದಾಶ್ರೀ:** ಅದು, ಅವರು ತಿಳಿದುಕೊಂಡಿದ್ದಾರೆ 'ನಾನು ದೊಡ್ಡವನು' ಎಂದು. ಅವರಲ್ಲಿ

ಅಹಂಕಾರವು ಮಾಧ್ಯಮವಾಗಿದೆ. ಯಾವ ಆತ್ಮ ಪ್ರಕಾಶವಿದೆಯೋ, ಅದರ ನಡುವೆ ಅಹಂಕಾರದ ಮಾಧ್ಯಮವಿರುತ್ತದೆ, ಜೊತೆಯಲ್ಲಿ ಬುದ್ಧಿಯು ಸೇರಿಕೊಂಡಿರುತ್ತದೆ. ನಮ್ಮ ಬಳಿ ಬುದ್ಧಿ ಇಲ್ಲ, ಏಕೆಂದರೆ ನಮ್ಮ ಅಹಂಕಾರವು ಸಂಪೂರ್ಣವಾಗಿ ಖಾಲಿಯಾಗಿರುವಾಗ, ಮತ್ತೆ ಬುದ್ಧಿಯನ್ನು ಎಲ್ಲಿಂದ ತರುವುದು? ನಮ್ಮಲ್ಲಿ (ಜ್ಞಾನಿಯಲ್ಲಿ) ಸ್ವಲ್ಪ ಮಟ್ಟಿಗಿನ ಅಹಂಕಾರವು ಇದ್ದಿದ್ದರೂ ನಮಗೆ ಜ್ಞಾನವೇ ಪ್ರಾಪ್ತಿಯಾಗುತ್ತಿರಲಿಲ್ಲ, ಪ್ರಕಾಶವೂ ಇರುತ್ತಿರಲಿಲ್ಲ. ಎಲ್ಲಿ ಅಹಂಕಾರವಿದೆಯೋ, ಅಲ್ಲಿ ಬುದ್ಧಿ ಇರುತ್ತದೆ ಹಾಗೂ ಅಹಂಕಾರವು ಸಂಪೂರ್ಣವಾಗಿ ಇಲ್ಲವಾದಾಗ, ಅಲ್ಲಿ ಆತ್ಮದ ಪ್ರಕಾಶವಿರುತ್ತದೆ.

ಬುದ್ಧಿ, ಎಲ್ಲರಲ್ಲೂ ಒಂದೇ ಸಮನಾಗಿ ಇರುವುದಿಲ್ಲ. ಒಬ್ಬರಲ್ಲಿ 80 ಶೇಕಡಾ, ಮತ್ತೊಬ್ಬರಲ್ಲಿ 81 ಶೇಕಡಾ, ಇನ್ನೊಬ್ಬರಲ್ಲಿ 82 ಶೇಕಡಾ, ಹೀಗೆ ಬೇರೆ ಬೇರೆ ಮಟ್ಟದಲ್ಲಿ ಇರುತ್ತದೆ. ಆದರೆ 100% (ನೂರಕ್ಕೆ ನೂರು) ಬುದ್ಧಿ ಯಾರಲ್ಲಿಯೂ ಇಲ್ಲ. ಯಾರಿಗೆ 100% ಬುದ್ಧಿ ಇರುವುದೋ ಅವರನ್ನು 'ಬುದ್ಧ ಭಗವಾನ್' ಎಂದು ಕರೆಯುತ್ತಾರೆ. ಬುದ್ಧ ಭಗವಾನರಿಗೆ ಬುದ್ಧಿಯು 100% ಇತ್ತು. ಆದರೆ, ಅದು ಪ್ರಕಾಶದಲ್ಲಿ ಬರಲಿಲ್ಲ. ಅವರ ಅಹಂಕಾರವು ಏನಾಗಿತ್ತು? ದಯೆ, ದಯೆ, ದಯೆ...., ಅವರಿಗೆ ಎಲ್ಲರ ದುಃಖವನ್ನು ನೋಡಿ ದಯೆ ಮೂಡುತ್ತಿತ್ತು. ಅವರಿಗೆ ಏನು ಅನ್ನಿಸುತ್ತಿತ್ತೋ, ಅದೆಲ್ಲವೂ ಅವರ ಅಹಂಕಾರವಾಗಿತ್ತು. ಹಾಗಾಗಿ ಅವರಿಗೆ ಜ್ಞಾನದಲ್ಲಿ ಮುಂದೆ ಹೋಗಲು ಆಗಲಿಲ್ಲ. ಅಂತಹ ಅಹಂಕಾರವು ಒಳ್ಳೆಯದ್ದೇ ಆಗಿದೆ, ಆದರೆ ಅಹಂಕಾರವು ಅಡ್ಡವಾಗಿರುವವರೆಗೂ ಮುಂದೆ ಹೋಗಲು ಹೇಗೆ ತಾನೇ ಸಾಧ್ಯ? ಅದೊಂದು ಬಿಟ್ಟರೆ ಬುದ್ಧರು 'ಭಗವಾನ್' ಅಗಿದ್ದರು. ಆದರೆ ಒಂದೇ ಒಂದು ಹೆಜ್ಜೆ (Step) ಮುಂದೆ ಹೋಗಿದಿದ್ದರೆ ಆಗ ಪೂರ್ಣ 'ಭಗವಾನ್' ಆಗಿಬಿಡುತ್ತಿದ್ದರು. ಹೇಗೆ 'ಮಹಾವೀರ್ ಭಗವಾನ್' ಆದರೋ, ಹಾಗೆ ಪೂರ್ಣ 'ಭಗವಾನ್' ಆಗಿಬಿಡುತ್ತಿದ್ದರು.

ಬುದ್ಧಿ ಇರುವಲ್ಲಿ ಮೋಕ್ಷವು ಎಂದೂ ಇಲ್ಲ, ಹಾಗೂ ಎಂದಿಗೂ ದೊರಕುವುದೂ ಇಲ್ಲ. ಇಪ್ಪತ್ತನಾಲ್ಕು ತೀರ್ಥಂಕರರಿಗೆ ಬುದ್ಧಿ ಸಂಪೂರ್ಣ ಇರಲಿಲ್ಲ.

**ಪ್ರಶ್ನಕರ್ತ:** ಆದರೆ ಅವರಿಗೆ ಅನಂತಜ್ಞಾನವಿದೆ ಎಂದು ಹೇಳಲಾಗುತ್ತದೆಯಲ್ಲ?

**ದಾದಾಶ್ರೀ:** ನಿಜ, ಅವರಿಗೆ ಅನಂತಜ್ಞಾನ ಸರ್ವಥಾ ಇದೆ. ಆದರೆ ಅವರಲ್ಲಿ ಬುದ್ಧಿ ಇಲ್ಲ. ಬುದ್ಧಿಯು ಲೋಕದಲ್ಲಿ ಎಲ್ಲರ ಬಳಿ ಇದೆ. ಬಡ ಜನರಲ್ಲಿಯೂ ಕೂಡ ಬುದ್ಧಿ ಇರುತ್ತದೆ.

**ಪ್ರಶ್ನಕರ್ತ:** ಹಾಗಿದ್ದರೆ ಬುದ್ಧಿ ಹಾಗು ಜ್ಞಾನದಲ್ಲಿನ ವ್ಯತ್ಯಾಸವೇನು?

**ದಾದಾಶ್ರೀ:** ಹೆಚ್ಚಿನ ವ್ಯತ್ಯಾಸವಿದೆ. ಕತ್ತಲು ಹಾಗೂ ಬೆಳಕಿನ ನಡುವೆ ಹೇಗೆ ಇದೆಯೋ, ಹಾಗೆ ಬಹಳ ವ್ಯತ್ಯಾಸವಿದೆ. ಈ ಸಂಸಾರದಲ್ಲಿ ಬುದ್ಧಿಯಿಂದಾಗಿಯೇ ಅಲೆದಾಡುತ್ತಿರುವುದು. ಬುದ್ಧಿಯಿಂದಾಗಿಯೇ ಭಗವಂತನ ಮಿಲನವಾಗುವುದಿಲ್ಲ ಹಾಗೂ ಬುದ್ಧಿಯು ಮೋಕ್ಷಕ್ಕೆ ಹೋಗಲು ಸಹ ಬಿಡುವುದಿಲ್ಲ. ಬುದ್ಧಿಯು, ಮೋಕ್ಷಕ್ಕೆ ಹೋಗದಂತೆ ಹಿಡಿದಿಟ್ಟುಕೊಳ್ಳುತ್ತದೆ (Protection). ಲಾಭ-ನಷ್ಟ (Profit-Loss), ಇದೆಲ್ಲಾ ಬುದ್ಧಿಯೇ ತಿಳಿಸಿಕೊಡುವುದಾಗಿದೆ ಹಾಗೂ ಮತ್ತೇನು ಮಾಡುತ್ತದೆ?

**ಪ್ರಶ್ನಕರ್ತ:** ವ್ಯವಹಾರದಲ್ಲಿ ಸಿಲುಕಿಸಿ ಬಿಡುತ್ತದೆ.

**ದಾದಾಶ್ರೀ:** ಹೌದು, ವ್ಯವಹಾರದಲ್ಲಿಯೇ ಸಿಕ್ಕಿಹಾಕಿಕೊಳ್ಳುವಂತೆ ಮಾಡಿ, ಅದರಿಂದ ಹೊರಗೆ ಬರುವುದಕ್ಕೂ ಬಿಡುವುದಿಲ್ಲ ಹಾಗೂ ಎಂದೂ ಮೋಕ್ಷಕ್ಕೆ ಹೋಗಲು ಬಿಡುವುದಿಲ್ಲ. ಬುದ್ಧಿಯು ಖಾಲಿಯಾಗಿ ಹೋದಮೇಲೆಯೇ, ಮೋಕ್ಷ ಪ್ರಾಪ್ತಿಯಾಗುವುದು. ನಮ್ಮಲ್ಲಿ ಬುದ್ಧಿ ಎಂಬುದು ಇಲ್ಲ. ಚಿಕ್ಕ ಮಕ್ಕಳಿಗೂ ಕೂಡ ಬುದ್ಧಿಯು ಇರುತ್ತದೆ. ಎಲ್ಲಾ ಮನುಷ್ಯರಿಗೂ ಬುದ್ಧಿಯಿದೆ. ಜಗತ್ತಿನಲ್ಲಿ ನಾವು ಒಬ್ಬರೇ ಬುದ್ಧಿ ಇಲ್ಲದೆ ಇರುವಂತಹ ವ್ಯಕ್ತಿ. ಈ ಜಗತ್ತಿನಲ್ಲಿನ ವಿಜ್ಞಾನಿಗಳಿಗೆ ಎಲ್ಲಾ ಪ್ರಕಾರದ ಜ್ಞಾನವಿದೆ. ಆದರೆ ಅದೆಲ್ಲವೂ ಬುದ್ಧಿಯಿಂದಾಗಿದೆ, ಯಾಕೆಂದರೆ ಆ ಜ್ಞಾನವು ಅಹಂಕಾರದಿಂದ ಕೂಡಿದೆ ಹಾಗು ಅಹಂಕಾರದ ಮಾಧ್ಯಮದಿಂದ ಉಂಟಾಗಿರುವ ಜ್ಞಾನವಾಗಿದೆ. ಆತ್ಮದ ಜ್ಞಾನವು ಪ್ರಕಾಶವಾಗಿದೆ, ಅದು ನೇರವಾಗಿ ಬರುವಂತಹ ಜ್ಞಾನವಾಗಿದೆ. ಎಲ್ಲಿ ಅಹಂಕಾರವು ಇಲ್ಲವೋ, ಅಲ್ಲಿ Direct ಜ್ಞಾನವಿದೆ. ಈ ಇಡೀ ಜಗತ್ತಿನ ಎಲ್ಲಾ ವಿಷಯಗಳನ್ನು (subject) ತಿಳಿಯಬಹುದಾಗಿದೆ, ಆದರೆ ಅದೆಲ್ಲವೂ ಅಹಂಕಾರಿ ಜ್ಞಾನವಾಗಿದ್ದರೆ, ಅಲ್ಲಿ ಬುದ್ಧಿ ಇರುತ್ತದೆ. ಹಾಗು ಯಾವುದು ನಿರಹಂಕಾರಿ ಜ್ಞಾನವಿದೆಯೋ, ಅಲ್ಲಿ ಜ್ಞಾನವಿದೆ.

ಈ ಜಗತ್ತು ಅಂದರೇನು? ಅದನ್ನು ಸಂಕ್ಷಿಪ್ತವಾಗಿ ಹೇಳಿಬಿಡುತ್ತೇನೆ. ಅದೇನೆಂದರೆ, ಒಂದು ಶುದ್ಧಾತ್ಮ ಹಾಗು ಮತ್ತೊಂದು ಸಂಯೋಗ, ಕೇವಲ ಇವೆರಡೇ ವಸ್ತುಗಳಿರುವುದು ಈ ಜಗತ್ತಿನಲ್ಲಿ.

ಸಂಯೋಗದಲ್ಲಿ ಬಹಳಷ್ಟು ವಿಭಜನೆಗಳಿವೆ. ಸ್ಥೂಲ ಸಂಯೋಗ, ಸೂಕ್ಷ್ಮ ಸಂಯೋಗ ಹಾಗೂ ವಾಣಿಯ ಸಂಯೋಗಗಳಿವೆ. ನೀವು ಏಕಾಂತದಲ್ಲಿ ಕುಳಿತಿರುವಾಗ ಮನಸ್ಸು ಏನನ್ನಾದರು ಹೇಳಿದರೆ, ಅದು ನಿಮ್ಮ ಸೂಕ್ಷ್ಮ ಸಂಯೋಗವಾಗಿದೆ. ಯಾರಾದರು ವ್ಯಕ್ತಿ ನಿಮಗೆ ಹೇಳಲು ಬಂದರೆ, ಅದು ಸ್ಥೂಲ ಸಂಯೋಗವಾಗಿದೆ. ನೀವು ಏನಾದರೂ ಹೇಳಿಬಿಟ್ಟರೆ, ಅದು ವಾಣಿಯ ಸಂಯೋಗವಾಗಿದೆ. ಯಾವ ಸಂಯೋಗ ಉಂಟಾಗಿದೆಯೋ, ಅದು ವಿಯೋಗಿ

ಸ್ವಭಾವದ್ದಾಗಿದೆ. ಯಾವ ಸಂಯೋಗ ಬರುವುದೋ, ಅದನ್ನು ನೀವೇನೂ ಹೊರಟುಹೋಗು ಅಥವಾ ಹೋಗಬೇಡ ಎಂದು ಹೇಳಬೇಕಾಗಿಲ್ಲ, ಹೋಗಬೇಡ ಎಂದು ಹೇಳಿದರೂ ಅದು ಹೊರಟುಹೋಗುತ್ತದೆ. ಸಂಯೋಗದ ಸ್ವಭಾವವೇ ವಿಯೋಗವಾಗಿದೆ. ಇಲ್ಲಿ ಶುದ್ಧಾತ್ಮ ಏನೂ ಮಾಡಬೇಕಾಗಿಲ್ಲ. ಸಂಯೋಗದ ಸಮಯ ಮುಗಿಯುತ್ತಲೇ ಅದು ಹೊರಟುಹೋಗುತ್ತದೆ. ಸಂಯೋಗದ ಸಮಯದಲ್ಲಿ ಬುದ್ಧಿಯು ಎರಡು ತರಹದಲ್ಲಿ ತೋರಿಸುತ್ತದೆ, 'ಹೀಗಾದರೆ ಒಳಿತು ಅಥವಾ ಹಾಗಾದರೆ ಕೆಡಕು' ಎಂದು. ಎಲ್ಲವೂ ಸಂಯೋಗದ ಅನುಸಾರವಾಗಿದೆ. ಆದರೆ ಬುದ್ಧಿಯು ಒಳ್ಳೆಯದು-ಕೆಟ್ಟದ್ದು ಎಂಬ ಹೆಸರನ್ನಿಡುತ್ತದೆ. ಆದರೆ ಇವುಗಳೆಲ್ಲಾ 'ಜ್ಞಾನಿಗಳು' ಅಬುದ್ಧರಾಗಿ ಇದ್ದುಬಿಡುತ್ತಾರೆ. ಸಂಯೋಗವನ್ನು ಸಂಯೋಗವೆಂದು ಒಪ್ಪಿಕೊಳ್ಳುತ್ತಾರೆ. ಅವರು ಸಂಯೋಗವನ್ನು ಎರಡು ಭಾಗ ಮಾಡುವುದಿಲ್ಲ. 'ಕೆಟ್ಟದ್ದು ಮತ್ತು ಒಳ್ಳೆಯದು' ಎಂಬ ದ್ವಂದ್ವವನ್ನು ಉಂಟುಮಾಡುವುದಿಲ್ಲ. ಯಾರು ಅಬುದ್ಧರಾಗಿ ಇರುತ್ತಾರೋ, ಅಂಥವರಿಗೆ ಸಂಯೋಗವು ಎಂದೂ ಹಾನಿಯನ್ನು ಉಂಟುಮಾಡುವುದಿಲ್ಲ. ಅಲ್ಲದೆ ಬುದ್ಧಿವಂತರು ಸಂಯೋಗಗಳ ಬಗ್ಗೆ 'ಒಳ್ಳೆಯದು-ಕೆಟ್ಟದ್ದು' ಎಂದು ವಿಮರ್ಶೆ ಮಾಡುವುದರಿಂದ ತೊಂದರೆಗಳು ಉಂಟಾಗುತ್ತವೆ.

ಬುದ್ಧಿಯು 100% ಇದ್ದರೂ, ಈ ಜಗತ್ತನ್ನು ಯಾರು ಸೃಷ್ಟಿಸಿದರು ಎಂಬುದನ್ನು ತಿಳಿಯಲಾಗುವುದಿಲ್ಲ. ಈಗಿನ ವಿಜ್ಞಾನಿಗಳು ತಿಳಿದಿದ್ದಾರೆ ಈ ಸೃಷ್ಟಿಯಲ್ಲಿ (Creation), ಸೃಷ್ಟಿಕರ್ತನ ಅವಶ್ಯಕತೆ ಇಲ್ಲ ಎಂದು.

## 'ಅಹಂ-ಕಾರ' ಇದಕ್ಕೆ ಪರಿಹಾರ (Solution)

ಯಾವುದು ತಿಗಣೆ ಸಾಯಿಸುವ ವಿಷ ಇದೆಯೋ, ಅದನ್ನು ಮನುಷ್ಯನು ಕುಡಿದುಬಿಟ್ಟು, ಅವನು ಮರಣ ಹೊಂದಿದರೆ, ಅಲ್ಲಿ ಭಗವಂತನು ಮಾಡುವುದಾದರೂ ಏನು?

**ಪ್ರಶ್ನಕರ್ತ:** ಆದರೆ ಔಷಧಿಯನ್ನು ಕುಡಿಯುವುದಕ್ಕೆ ಬುದ್ಧಿಯನ್ನು ಯಾರು ಕೊಡುತ್ತಾರೆ?

**ದಾದಾಶ್ರೀ:** ಒಳಗೆ ಯಾವ ಬುದ್ಧಿವಂತಿಕೆ ಇದೆಯೋ, ಅದು ಹೇಳಿಕೊಡುತ್ತದೆ.

**ಪ್ರಶ್ನಕರ್ತ:** ಅದು ಆತ್ಮವೇ?

**ದಾದಾಶ್ರೀ:** ಅಲ್ಲ, ಆತ್ಮವು ಇದರಲ್ಲಿ ಮಧ್ಯ ಪ್ರವೇಶಿಸುವುದಿಲ್ಲ. ಆತ್ಮವು ನಿರ್ಲಿಪ್ತವಾಗಿದೆ, ಅಸಂಗವಾಗಿದೆ. ಇದೆಲ್ಲಾ ಅಹಂಕಾರದ ಕಾರ್ಯವಾಗಿದೆ.

**ಪ್ರಶ್ನಕರ್ತ:** ಅವನು ಆ ತಿಗಣೆ ಸಾಯಿಸುವ ಔಷಧಿಯನ್ನು ತೆಗೆದುಕೊಳ್ಳುವುದರ ಹಿಂದೆ ಅವನಿಗೆ ಪೂರ್ವದ ಸಂಬಂಧವೇನಾದರೂ ಇದೆಯೇ?

**ದಾದಾಶ್ರೀ:** ಹೌದು, ಪೂರ್ವದ ಸಂಭಂದದಿಂದಾಗಿಯೇ ಹಾಗೆ ಮಾಡುವುದಾಗಿದೆ. ಅದು ನಮ್ಮದೇ ಕರ್ಮದಿಂದಾಗಿದೆ, ಬೇರೆ ಯಾವುದರಿಂದಲೂ ಅಲ್ಲ. ಭಗವಂತನು ಇದರಲ್ಲಿ ಮಧ್ಯ ಪ್ರವೇಶಿಸುವುದಿಲ್ಲ. ಅವನ ಕರ್ಮದಿಂದಾಗಿ ಬುದ್ಧಿಯು ಆ ರೀತಿಯಲ್ಲಿ ಅವನಿಗೆ ಸಾಯಿಸುವ ವಿಷವನ್ನು ಕುಡಿಸಿಬಿಡುತ್ತದೆ. ಆತ್ಮವು ಯಾವಾಗಲೂ ಅಸಂಗವಾಗಿಯೇ ಇರುತ್ತದೆ.

ಜನರು ಹೇಳುತ್ತಾರೆ, ಆತ್ಮದ ಇಚ್ಛೆಯಿಂದಾಗಿದೆ ಎಂದು. ಆತ್ಮಕ್ಕೆ ಇಚ್ಛೆಯೇ ಉಂಟಾಗುವುದಿಲ್ಲ, ಆತ್ಮಕ್ಕೆ ಇಚ್ಛೆ ಎನ್ನುವುದೇ ಇಲ್ಲ. ಆತ್ಮಕ್ಕೆ ಏನಾದರು ಇಚ್ಛೆಯೆನ್ನುವುದು ಇದ್ದಿದ್ದರೆ ಆಗ ಅದು ಭಿಕಾರಿಯ ಹಾಗೆ ಇರಬೇಕಾಗುತ್ತಿತ್ತು. ಆತ್ಮಕ್ಕೆ ಇಚ್ಛೆಯಾಗಿ ಬಿಟ್ಟರೆ ಆಗ ಎಲ್ಲವೂ ಮುಗಿದ ಹಾಗೆ. ಆದರೆ ಇದೆಲ್ಲಾ ಅಹಂಕಾರದಿಂದಾಗಿದೆ, ನಡುವಿನಲ್ಲಿನ ಈ 'ಅಹಂ' ನಿಂದಾಗಿಯೇ ಆಗಿದೆ. ಯಾವಾಗ ಅಹಂಕಾರವು ಹೊರಟು ಹೋಗುವುದೋ, ಆಗ ಎಲ್ಲಾ ಗೊಂದಲಗಳು ನಿವಾರಣೆಯಾಗಿ ಬಿಡುತ್ತವೆ (Puzzle Solve). ಈ ಗೊಂದಲಗಳನ್ನು ಪರಿಹರಿಸಿ ಕೊಳ್ಳಬೇಕೆಂದು ವಿಚಾರ ಮಾಡಿದ್ದೀರಾ? ಆದರೆ, ಜೀವನದಲ್ಲಿ ಗೊಂದಲಗಳು ಇದ್ದರೇನೇ ಪ್ರಗತಿಯಾಗುವುದು. ಗೊಂದಲಗಳು ಇರಬೇಕು, ಸಮಸ್ಯೆಗಳು ಇರಬೇಕು. ಪ್ರಗತಿ ಹೊಂದಬೇಕಿದ್ದರೆ ಸಮಸ್ಯೆಗಳಿರಬೇಕು. ಆಗ, ಮನಸ್ಸನ್ನು ಒರೆಗೆ ಹಚ್ಚಬೇಕು (Testing), ಬುದ್ಧಿಯನ್ನು ಒರೆಗೆ ಹಚ್ಚಬೇಕು, ಅಹಂಕಾರವನ್ನು ಒರೆಗೆ ಹಚ್ಚಿ ನೋಡಬೇಕು.

ಜನರು 'ನಾವು ಹೇಳಿದೆವು' ಎಂದು ಅವರೇ ವಾಣಿಯ ಮಾಲೀಕರಾಗಿ ಬಿಡುತ್ತಾರೆ. ಎಲ್ಲಾ ಜನರು ಭ್ರಾಂತಿಯಿಂದ ಹೇಳುತ್ತಾರೆ, 'ನಾನು ಹಾಗೆ ಮಾಡಿದೆ, ಹೀಗೆ ಮಾಡಿದೆ' ಎಂದು. ಅದೆಲ್ಲಾ ಭ್ರಾಂತಿಯಾಗಿದೆ, ಅದು ಯಾವುದೂ ನಿಜವಲ್ಲ. ಭ್ರಾಂತಿಯಿಂದಾಗಿ ಅಹಂಕಾರವು ಉಂಟಾಗುತ್ತದೆ. ಈ ಅಹಂಕಾರದಿಂದಾಗಿ, ಜನ್ಮ-ಜನ್ಮಾಂತರಗಳ ಬಂಧನಕ್ಕೆ ಸಿಲುಕ ಬೇಕಾಗುತ್ತದೆ.

ಯಾವಾಗ ಅಂತಿಮ ಸಮಯವು (Last Station) ಹತ್ತಿರವಾಗುತ್ತಲಿದ್ದು ಇನ್ನೇನು, ಎರಡು-ಮೂರು ದಿನಗಳು ಉಳಿದಿರುವಾಗ ಏನಾಗುತ್ತದೆ? ಏನು ಹೇಳುತ್ತಾರೆ? 'ನನಗೆ ಮಾತನಾಡಲು ಆಗುತ್ತಿಲ್ಲ', ಮಾತು ನಿಂತು ಹೋಗಿದೆ' ಎಂದು ಹೇಳುತ್ತಾರೆ. ಅಲ್ಲದೆ ಮೊದಲಿಗೆ ಅವರೇ ಹೇಳುತ್ತಿದ್ದರು, 'ನಾನು ಮಾತನಾಡುತ್ತೇನೆ, ನಾನು ಹೇಳುತ್ತೇನೆ' ಎಂದು. ಅರೇ, ಏನು ಹೇಳುತ್ತಾರೆ?

ಇಡೀ ಜಗತ್ತಿನಲ್ಲಿ ಯಾವ ಅಂಥ ವ್ಯಕ್ತಿಯು ಹುಟ್ಟಿಲ್ಲ, ತನ್ನದೇ ಆದ ಶಕ್ತಿಯಿಂದ ಸಂಡಾಸಿಗೆ ಹೋಗಬಲ್ಲವನು. ಎಂದಾದರೊಂದು ದಿನ ಸಂಡಾಸಿಗೆ ಹೋಗಲಾಗದೆ ಇರುವಾಗ ಅರ್ಥವಾಗುತ್ತದೆ, ಅದು ನಮ್ಮ ಶಕ್ತಿಯಿಂದಲ್ಲ ಎಂದು. ಇಡೀ ದಿನ ಏನು ಹೇಳುತ್ತಾರೆ 'ಇದೆಲ್ಲವನ್ನು ನಾವು ಹೇಳಿದೆವು, ನಾವು ಹೀಗೆ ಹೇಳುತ್ತೇವೆ, ನಾವು ಹಾಗೆ ಹೇಳಿದ್ದೇವೆ' ಎಂದು. ನಂತರ ಹೊರಡುವ (ಅಂತಿಮ) ಸಮಯ ಬಂದಾಗ, 'ಹೇಳುತ್ತಿದ್ದವರು' ಎಲ್ಲಿಗೆ ಹೊರಟು ಹೋದರು? ಆಗ ಹೇಳುತ್ತಾರೆ, 'ಮಾತನಾಡಲು ಶಕ್ತಿಯಿಲ್ಲ, ಎಲ್ಲಾ ನಿಂತುಹೋಗಿದೆ' ಎಂದು.

ಇಲ್ಲಿ ಕೇವಲ ಅಹಂಕಾರ ಮಾಡಲಾಗುತ್ತಿದೆ ಏನೆಂದರೆ, 'ನಾವು ಅದು ಮಾಡಿದೆವು, ನಾವು ಇದು ಮಾಡಿದೆವು' ಎಂದು. ನಮ್ಮಲ್ಲಿ (ಜ್ಞಾನಿಗಳಲ್ಲಿ) ಅಹಂಕಾರ ಸುತರಾಂ ಇಲ್ಲ. ಎಂದೂ ಈ ದೇಹದ ಮಾಲೀಕರಾಗಲಿ, ಈ ವಾಣಿಯ ಮಾಲೀಕರಾಗಲಿ, ಈ ಮನಸ್ಸಿನ ಮಾಲೀಕರಾಗಲಿ, ನಾವಲ್ಲ. ಆದರೆ ನೀವುಗಳು ಎಲ್ಲದರ ಮಾಲೀಕರಾಗಿದ್ದೀರಿ, 'ಇದು ನಮ್ಮದು, ಅದು ನಮ್ಮದು' ಎಂದು. ಯಾವ ಮನುಷ್ಯನೂ ಮೃತ್ಯುವಿನ ನಂತರ ಎನ್ನನೂ ಜೊತೆಯಲ್ಲಿ ಕೊಂಡುಹೋಗುವುದಿಲ್ಲ. ನಿಮ್ಮದಾಗಿದ್ದರೆ ಜೊತೆಯಲ್ಲಿ ತೆಗೆದುಕೊಂಡು ಹೋಗಬಹುದಲ್ಲ? ಆದರೆ ಯಾರೂ ತೆಗೆದುಕೊಂಡು ಹೋಗುವುದಿಲ್ಲ. ಅವರಿಗೆ ಇಷ್ಟವಿದ್ದರೂ ಸಹ ಜೊತೆಯಲ್ಲಿ ಕೊಂಡುಹೋಗಲು ಹೇಗೆ ತಾನೇ ಸಾಧ್ಯವಾಗುತ್ತದೆ? ಬಾಡಿಗೆಯ ಮನೆಯನ್ನು (ಈ ಶರೀರವನ್ನು) ಖಾಲಿ ಮಾಡಲು ಇಷ್ಟವಿಲ್ಲದಿದ್ದರೂ ಸಹ, ಮಾಡುವುದು ಏನು? ಹೊಡೆದು-ಬಡೆದು ಖಾಲಿ ಮಾಡಿಸಲಾಗುತ್ತದೆ.

ನೀವೇ ಸ್ವತಃ ಭಗವಂತನಾಗಿದ್ದೀರಾ, ಆದರೆ ನಿಮಗದು ತಿಳಿದಿಲ್ಲ. ನಾವಂತೂ ಅದನ್ನು ನೋಡುತ್ತಿದ್ದೇವೆ, ಅನುಭವಿಸುತ್ತಿದ್ದೇವೆ, ಆದರೆ ನಿಮಗೆ ಭಗವಂತನ ಅನುಭವವಾಗಿಲ್ಲ. ನೀವೇ ಆತ್ಮ ಆದರೆ ನಿಮಗೆ ಅದರ ಅನುಭವವಿಲ್ಲ. ಆತ್ಮಸಾಕ್ಷಾತ್ಕಾರವನ್ನು (Self-Realisation) ಮಾಡಿಕೊಳ್ಳದೆ ಹಾಗೂ ಯಾವುದು ನಿಮ್ಮ ಸ್ವರೂಪವಲ್ಲವೋ ಅದನ್ನೇ 'ನನ್ನ ಸ್ವರೂಪ' ಎಂದು ಭಾವಿಸಿಕೊಂಡಿರುವುದಾಗಿದೆ.

**ಪ್ರಶ್ನಕರ್ತ:** ಎಲ್ಲಾ ಜನರು ಹೇಳುತ್ತಾರೆ, 'ಅಹಂ' ಅನ್ನು ಮರೆಯಬೇಕು ಎಂದು. ಹಾಗು 'ಅಹಂ' ಅನ್ನು ಮರೆಯಲು ನಾವು ಸಿದ್ಧರಿದ್ದೇವೆ, ಆದರೆ ಅದನ್ನು ಮರೆಯಲಾಗದೆ ಇದ್ದಾಗ ಏನು ಮಾಡುವುದು?

**ದಾದಾಶ್ರೀ:** ಯಾವ ವ್ಯಕ್ತಿಯೂ 'ಅಹಂ' ಅನ್ನು ಮರೆಯಲು ಸಾಧ್ಯವಿಲ್ಲ.

**ಪ್ರಶ್ನಕರ್ತ:** ಹಾಗಾದರೆ ಈ 'ಅಹಂ' ಅನ್ನು ಬಿಡುವುದು ಹೇಗೆ? ಇದಕ್ಕಾಗಿ ಏನು ಮಾಡಬೇಕು?

**ದಾದಾಶ್ರೀ:** ಯಾರು 'ಜ್ಞಾನಿ ಪುರಷರು' ಇರುತ್ತಾರೋ, ಅವರ ವಿಜ್ಞಾನದಿಂದ ಎಲ್ಲವೂ ಸಾಧ್ಯವಾಗುತ್ತದೆ. ಬೇರೆ ಯಾವ ಜ್ಞಾನದಿಂದ ಏನೂ ನಡೆಯುವುದಿಲ್ಲ. ಅವೆಲ್ಲವೂ ಜ್ಞಾನವೆ, ಆದರೆ ಅದು 'Relative' ಜ್ಞಾನವಾಗಿದೆ. ಅಲ್ಲಿ ಮಾಡಬೇಕಾಗಿ ಬರುತ್ತದೆ. ಆದರೆ ಇದು 'Real' ಜ್ಞಾನವಾಗಿದೆ, ಇದನ್ನು ವಿಜ್ಞಾನವೆಂದು ಹೇಳಲಾಗುತ್ತದೆ. ವಿಜ್ಞಾನವನ್ನು ಅರಿತ ಮೇಲೆ ನಿಮಗೂ ಏನೂ ಮಾಡಬೇಕಾದದ್ದು ಇಲ್ಲವೇ ಇಲ್ಲ ಎಂದೆನಿಸುತ್ತದೆ.

**ಪ್ರಶ್ನಕರ್ತ:** ಕೆಲವರು ಹೇಳಿಕೊಳ್ಳುತ್ತಾರೆ, ನಮಗೆ ಜ್ಞಾನವಾಗಿದೆ ಎಂದು. ಹಾಗಾದರೆ ಅದು ಏನು?

**ದಾದಾಶ್ರೀ:** ಇಲ್ಲ, ಅದು ಜ್ಞಾನವಲ್ಲ. ಯಾವುದನ್ನು ಜ್ಞಾನವೆಂದು ತಿಳಿದಿದ್ದಾರೋ, ಅದು ಯಾಂತ್ರಿಕವಾಗಿದೆ (Mechanical) ಬುದ್ಧಿಜನ್ಯ ಜ್ಞಾನವಾಗಿದೆ. ನಿಜವಾದ ಜ್ಞಾನ, ಅದು ಬೇರೆಯೇ ವಸ್ತುವಾಗಿದೆ. ಆ ಜ್ಞಾನವನ್ನು ವರ್ಣಿಸಲು ಅಸಾಧ್ಯವಾಗಿದೆ. ಜ್ಞಾನದ ಒಂದು ಶೇಕಡಾ (1%) ಕೂಡಾ ಇಂದು ಯಾರೂ ನೋಡಿಲ್ಲ. ಅವರು ತಿಳಿದಿರುವುದೆಲ್ಲಾ Mechanical ಚೇತನದ ಮಾತಾಗಿದೆ, ಬೌದ್ಧಿಕದ ಮಾತಾಗಿದೆ ಹಾಗೂ ಅದು ಬೌದ್ಧಿಕದ ಸೂಕ್ಷ್ಮ ವಿಭಾಗವಾಗಿದೆ. ಯಾವುದು ಭಕ್ತಿ ವಿಭಾಗವಾಗಿದೆಯೋ, ಅಲ್ಲಿ 'ನಾನು' ಮತ್ತು 'ಭಗವಂತ' ಬೇರೆ ಎನ್ನುವುದು ಇರುತ್ತದೆ. ಆದರೆ ಜಗತ್ತಿಗೆ ಈ ಜ್ಞಾನವು ಸೂಕ್ತವಾಗಿದೆ. ಯೋಗ್ಯವಾದ ಜ್ಞಾನವೆಂದು ಯಾವುದನ್ನು ಕರೆಯುತ್ತಾರೆಂದರೆ, ಯಾವುದು ಪೂರ್ಣತೆಯನ್ನು ಹೊಂದಿರುವುದೋ, ಅದು ಯೋಗ್ಯವಾದ ಜ್ಞಾನವಾಗಿದೆ. ಅದರಿಂದಾಚೆಗೆ ಏನನ್ನೂ ತಿಳಿಯಬೇಕಾದ ಅವಶ್ಯಕತೆಯೇ ಇರುವುದಿಲ್ಲವೋ, ಅಂಥದ್ದನ್ನು 'ಕೇವಲಜ್ಞಾನ' ಎಂದು ಕರೆಯಲಾಗುತ್ತದೆ; ಇದರಲ್ಲಿ ಯಾವ ಕ್ರಿಯೆಯೂ ಇಲ್ಲ. ಜಗತ್ತಿನಲ್ಲಿ ಯಾವ ಜ್ಞಾನವಿದೆಯೋ, ಅದು ಕ್ರಿಯಾಶೀಲ ಜ್ಞಾನವಾಗಿದೆ.

ಈ ದೇಹವು ಪ್ರಸ್ತುತ ಜೀವನದಲ್ಲಿ (one life) ಹೀಗೆಯೇ ನಡೆಯುತಲಿರುತ್ತದೆ. ಇದರಲ್ಲಿ ಆತ್ಮದ ಯಾವ ಕ್ರಿಯೆ ಇಲ್ಲದಿದ್ದರೂ ಏನೂ ಸಮಸ್ಯೆಯಿಲ್ಲ. ಆದರೆ, ಇದಕ್ಕೆ (ದೇಹಕ್ಕೆ) ಆತ್ಮದ ಉಪಸ್ಥಿತಿಯ ಅವಶ್ಯಕತೆ ಇದೆ. 'ನಾವು' 'ಅದರ' ಜೊತೆಯಲ್ಲಿ ಇರುವುದರಿಂದಾಗಿ, ಎಲ್ಲಾ ಕ್ರಿಯೆಗಳು ನಡೆಯುತ್ತವೆ. ಈ ಎಲ್ಲಾ ಕ್ರಿಯೆಗಳು Mechanical ಆಗಿವೆ. ಜಗತ್ತು ಯಾವುದವನ್ನು ಆತ್ಮವೆಂದು ಪರಿಗಣಿಸಿದೆಯೋ, ಅದು Mechanical ಆತ್ಮವಾಗಿದೆ, ನಿಜವಾದ ಆತ್ಮ ಅದಲ್ಲ. ನಿಜವಾದ ಆತ್ಮವನ್ನು 'ಜ್ಞಾನಿ' ನೋಡಿದ್ದಾರೆ ಹಾಗು ಜ್ಞಾನಿಯು ಅದರಲ್ಲಿಯೇ (ಅತ್ಮದಲ್ಲಿಯೇ) ಇರುತ್ತಾರೆ. ನಿಜವಾದ ಆತ್ಮವು 'ಸ್ವತಃ' ತಾನೇ ಆಗಿದೆ. ಅದನ್ನು (ಆತ್ಮವನ್ನು) 'ಯಾರು' ತಿಳಿದಿರುತ್ತಾರೆ, ಅವರೇ 'ಸ್ವಯಂ' ಆಗಿರುತ್ತಾರೆ. ನಿಜವಾದ ಆತ್ಮ ಅಚಲವಾಗಿದೆ ಹಾಗು

Mechanical ಆತ್ಮ ಚಂಚಲವಾಗಿದೆ. ಎಲ್ಲಾ ಜನರು Mechanical ಆತ್ಮದ ಹುಡುಕಾಟವನ್ನು ಮಾಡುತ್ತಾರೆ. ಅವರಿಗಿನ್ನೂ ಆ Mechanical ಆತ್ಮ ಎನ್ನುವುದೇ ಸರಿಯಾಗಿ ಲಭ್ಯವಾಗಿಲ್ಲ, ಹಾಗಿರುವಾಗ ಅಚಲದ ಬಗೆಗಿನ ಮಾತು ಎಲ್ಲಿಂದ ಲಭ್ಯವಾಗಲು ಸಾಧ್ಯ? ಅದು ಏನಿದ್ದರು 'ಜ್ಞಾನಿ ಪುರುಷರ' ಕೆಲಸವಾಗಿದೆ. ಎಂದೋ ಅಲ್ಪ ಸಮಯದವರೆಗೆ ಮಾತ್ರ 'ಜ್ಞಾನಿ ಪುರುಷರ' ಉಪಸ್ಥಿತಿಯು ಲಭ್ಯವಿರುತ್ತದೆ. ಸಾವಿರಾರು ವರ್ಷಗಳಲ್ಲಿ ಎಲ್ಲೋ ಒಬ್ಬಿಬ್ಬರು 'ಜ್ಞಾನಿ ಪುರುಷರು' ಇರುತ್ತಾರೆ. ಆಗ ಅವರಿಂದ ಆತ್ಮವು ಅನಾವರಣಗೊಂಡಾಗ, ನಮ್ಮ ಅರಿವಿಗೆ ಬರುತ್ತದೆ.

ಪ್ರತಿಯೊಂದು ಪುಸ್ತಕದಲ್ಲಿ ಬರೆದಿದೆ, ಪ್ರತಿಯೊಂದು ಧರ್ಮದ ಗ್ರಂಥಗಳಲ್ಲಿ ಬರೆಯಲಾಗಿದೆ. ಅದೇನೆಂದರೆ, ಆತ್ಮಜ್ಞಾನವನ್ನು ಅರಿತುಕೊ, ಅದುವೇ ಅಂತಿಮ ವಿಚಾರವಾಗಿದೆ. ಹಿಂದುಸ್ತಾನದಲ್ಲಿ ಈಗಲೂ ಬಹಳಷ್ಟು ಸಂತರು, ಮಹಾತ್ಮರು ಇದ್ದಾರೆ. ಅವರೆಲ್ಲರೂ ಆತ್ಮದ ಅನ್ವೇಷಣೆಯನ್ನು ಮಾಡುತ್ತಲೇ ಇರುತ್ತಾರೆ. ಆದರೆ ಆತ್ಮ ಪ್ರಾಪ್ತಿಯಾಗಿರುವಂತಹ ಯಾವ ವ್ಯಕ್ತಿಯು ಇಲ್ಲ. (ಸಾಮಾನ್ಯವಾಗಿ) ಆತ್ಮ, ಸಿಗುವಂತಹ ವಸ್ತುವಲ್ಲ. ಯಾರು 'ಸಿಕ್ಕಿದೆ' ಎಂದು ಹೇಳುತ್ತಾರೋ, ಅದು ಅವರು ಭ್ರಾಂತಿಯಿಂದ ಹೇಳುತ್ತಾರೆ. ಅವರಿಗೆ ತಿಳಿದೇಯಿಲ್ಲ ಆತ್ಮ ಎಂತಹ ವಸ್ತು ಎಂದು. ಆತ್ಮ ಸ್ವತಃ ಪರಮಾತ್ಮವೇ ಆಗಿದೆ. ಎಂದಾದರೂ ಅದು ಸಿಕ್ಕಿಬಿಟ್ಟರೆ, ಸ್ವತಃ ತಾನು ಪರಮಾತ್ಮನೇ ಆಗಿ ಬಿಡುತ್ತಾನೆ. ಎಲ್ಲಿಯವರೆಗೆ 'ಹೇ ಭಗವಂತ! ಇದು ಮಾಡಿಕೊಡು, ಅದು ಮಾಡಿಕೊಡು' ಎಂದು ಬೇಡುತಲಿರುತ್ತಾನೋ, ಅಲ್ಲಿಯವರೆಗೆ 'ನಾನೇ ಸ್ವಯಂ ಭಗವಂತ, ನಾನೇ ಸ್ವಯಂ ಪರಮಾತ್ಮ,' ಎಂದು ಹೇಳುವ ಸಾಹಸವನ್ನು ಮಾಡಲಾಗುವುದಿಲ್ಲ.ಎಲ್ಲಿಯವರೆಗೆ 'ನಾನು-ನೀನು, ನಾನು-ನೀನು' ಇರುವುದೋ, ಅಲ್ಲಿಯವರೆಗೆ ಅವನು ಏನ್ನನ್ನೂ ಗಳಿಸಲು ಸಾಧ್ಯವಾಗುವುದಿಲ್ಲ.

**ಪ್ರಶ್ನಕರ್ತ:** ಅದಕ್ಕಾಗಿ ಏನು ಮಾಡಬೇಕು?

**ದಾದಾಶ್ರೀ:** ಏನು ಮಾಡಬೇಕಾಗಿಲ್ಲ; ಅಂತಹ ಯಾವ ವ್ಯಕ್ತಿಯೂ ಇಲ್ಲ, ಅದಕ್ಕಾಗಿ ಏನನ್ನಾದರು ಮಾಡಬಲ್ಲವರು. ಏಕೆಂದರೆ ನೀವು ಒಂದು ಆಟದ ಬುಗುರಿಯ ಹಾಗೆ (You are a Top) ನಿಮ್ಮಲ್ಲಿ ಯಾವ ಶಕ್ತಿಯೂ ಇಲ್ಲ. ನಿಮ್ಮನ್ನು ಪ್ರಕೃತಿ ಆಡಿಸುತ್ತದೆ. ನಿಮಗೆ 'ನೀವು ಯಾರು?' ಎಂಬುದು ತಿಳಿದಿಲ್ಲ. ನಿಮ್ಮ ಅಸ್ತಿತ್ವ ಎಂತಹದ್ದು? ನೀವು ಏನು ಮಾಡಬಲ್ಲಿರಿ? ಎಂಬ ಅರಿವು ನಿಮಗಿಲ್ಲ. ಯಾವುದನ್ನು ಪ್ರಕೃತಿಯೆಂದು ತಿಳಿಯಲಾಗಿದೆಯೋ, ಅಲ್ಲಿ ಪ್ರಕೃತಿಯ ಆಧಾರದಿಂದ ನಡೆಯುವುದಾಗಿದೆ ಹಾಗೂ ತನ್ನನ್ನು ಕೂಡಾ 'ತಾನು' ತಿಳಿಯಲಾಗಿದೆಯೋ, ಅಲ್ಲಿ ತನ್ನಯ

ಆಧಾರದಿಂದ ನಡೆಯುತ್ತದೆ. ಎರಡೂ ವಿಭಿನ್ನವಾಗಿದೆ. ಯಾವುದು ಸ್ವ-ಪರ ಪ್ರಕಾಶಕವಾಗಿದೆ, ಅದು ಎಲ್ಲವನ್ನೂ ಮಾಡಬಲ್ಲದ್ದು. ಇಡೀ ಜಗತ್ತಿನ ಜನರನ್ನು ನಾವು (ಜ್ಞಾನಿ) ಬುಗುರಿಗಳು ಎಂದು ಹೇಳುತ್ತೇವೆ. ನಿಜವಾಗಿ ನೋಡಿದರೆ, ಎಲ್ಲರೂ ಬುಗುರಿಗಳೇ ಆಗಿದ್ದಾರೆ! ಪ್ರಕೃತಿಯು ಕುಣಿಸಿದಂತೆ, ನೀವು ಕುಣಿಯುವುದಾಗಿದೆ; ನಂತರ ಹೇಳಲಾಗುತ್ತದೆ, 'ನಾನು ಕುಣಿಯುತ್ತಿದ್ದೇನೆ' ಎಂದು. ಆದರೆ ಜ್ಞಾನಿಪುರುಷರಲ್ಲಿ 'ಸ್ವ' ಹಾಗು 'ಪರ' ಎರಡು ಪ್ರತ್ಯೇಕವಾಗಿಯೇ ಇರುತ್ತವೆ ಹಾಗೂ ಅವೆರಡರ ನಡುವೆ ಭೇದರೇಖೆ (line of demarcation) ಇರುತ್ತವೆ. 'ಪರ' ಎನ್ನುವುದು ಪ್ರಕೃತಿಯ ವಿಭಾಗ, ಅನಾತ್ಮ ವಿಭಾಗವಾಗಿದೆ, ಮತ್ತು 'ಸ್ವ' ಎನ್ನುವುದು ತನ್ನ ವಿಭಾಗ, ಆತ್ಮದ ವಿಭಾಗವಾಗಿದೆ. ಆತ್ಮದ ವಿಭಾಗವು (home department) ಹಾಗೂ ಅನಾತ್ಮ ವಿಭಾಗವು (foreign department), ಎರಡು ಪ್ರತ್ಯೇಕವಾಗಿಯೇ ಇರುತ್ತವೆ. ಆತ್ಮವು, ಅವಶ್ಯಕತೆ ಬಿದ್ದಾಗ ಮಾತ್ರ ಅನಾತ್ಮ ವಿಭಾಗಕ್ಕೆ ಬಂದು ಪ್ರಕಾಶವನ್ನು ನೀಡುತ್ತದೆ ಆದರೆ ಆತ್ಮವು, ಎಂದೂ ಯಾವ ಕ್ರಿಯೆಯನ್ನು ಮಾಡುವುದಿಲ್ಲ; ಆತ್ಮಕ್ಕೆ ಕ್ರಿಯೆಯನ್ನು ಮಾಡುವ ಸಾಮರ್ಥ್ಯವು ಇರುವುದಿಲ್ಲ. ಆತ್ಮವು ದರ್ಶನ ಕ್ರಿಯೆ ಹಾಗು ಜ್ಞಾನ ಕ್ರಿಯೆ ಎಂಬುದೆರಡು ಕ್ರಿಯೆಗಳನ್ನು ಮಾತ್ರ ಹೊಂದಿರುತ್ತದೆ. ಇಲ್ಲಿ ನಮಗೆ ಕಾಣಸಿಗುವಂತಹ ಯಾವುದೇ ಕ್ರಿಯೆಗಳನ್ನು ಮಾಡುವ ಶಕ್ತಿ ಆತ್ಮಕ್ಕೆ ಇರುವುದಿಲ್ಲ. ಅದಕ್ಕೆ ಅಂಥದೆನಾದರೂ ಮಾಡಬೇಕೆಂಬ ಇಚ್ಛೆಯಾದರೆ, ಆಗ ಕೇವಲ ಕಲ್ಪನೆಯನ್ನು ಮಾತ್ರ ಮಾಡಬಲ್ಲದ್ದು, ಇದಕ್ಕಾಗಿ ಯಾವುದೇ ಅಂಗಗಳ ಅವಶ್ಯಕತೆಯು ಇರುವುದಿಲ್ಲ. ಆದರೆ ಕಲ್ಪನೆಯನ್ನು ಮಾಡಿದ ನಂತರ ಅಂಗಸಹಿತವಾಗುತ್ತದೆ. ಈ ಕಲ್ಪನೆಯಿಂದಲೇ ಜಗತ್ತು ನಿಂತಿರುವುದಾಗಿದೆ. ನಂತರ ಅದಕ್ಕೆ ಎಲ್ಲಾ ವಸ್ತು ಆಕಾರಗಳು ದೊರೆಯುತ್ತವೆ. ನಂತರ ಅದಕ್ಕೆ ಹೊರಗಿನ ಕಲ್ಪನೆಗಳು ಇಷ್ಟವಾಗುವುದಿಲ್ಲ, ಆದುದರಿಂದ ಮೋಕ್ಷವನ್ನು ಯಾಚಿಸತೊಡಗುತ್ತದೆ. 'ಹೇ ಭಗವಂತ! ನನಗೆ ಇದು ಯಾವುದೂ ಬೇಡ. ನನಗೆ ಮೋಕ್ಷವೇ ಬೇಕು' ಎಂದು. ಯಾರು ಭಗವಂತನಿದ್ದಾನೆ, ಅವನ ಒಂದೇ ಒಂದು ಕಲ್ಪನೆಯಿಂದ ಇಡೀ ಜಗತ್ತೇ ನಿರ್ಮಾಣವಾಗಿ ಬಿಡುತ್ತದೆ! ಅಷ್ಟೊಂದು ಶಕ್ತಿ ಕಲ್ಪನೆಗೆ ಇದೆ! ಭಗವಂತನಲ್ಲಿ ಕಲ್ಪನೆಯ ಶಕ್ತಿ ಇದೆ. ಆದರೆ ನಮ್ಮ ಹಾಗೆ ಬೇರೆ ಯಾವ ಶಕ್ತಿಯು ಇಲ್ಲ, ಅಹಂಕಾರ (Egoism) ಇಲ್ಲ.

ಯಾಕಾಗಿ ಅಹಂಕಾರವನ್ನು ಮಾಡಬೇಕು? ದೊಡ್ಡ ವ್ಯಕ್ತಿಗೆ ಅಹಂಕಾರ ಮಾಡಬೇಕಾದ ಅವಶ್ಯಕತೆಯಾದರೂ ಏನಿದೆ? ಸಣ್ಣ ವ್ಯಕ್ತಿಯೇ ಅಹಂಕಾರ ಮಾಡುವುದು. ಯಾರು ದೊಡ್ಡವರಿದ್ದಾರೆ, ಅವರಿಗಿಂತ ದೊಡ್ಡವರು ಯಾರು ಇಲ್ಲದಿರುವಾಗ ಅವರಿಗೆ ಅಹಂಕಾರದ ಅಗತ್ಯವಾದರೂ ಏನಿದೆ? ನಾನು (ಜ್ಞಾನಿ) ಸ್ವತಃ ತಿಳಿದಿದ್ದೇನೆ, ಬ್ರಹ್ಮಾಂಡದಲ್ಲಿ

ನನಗಿಂತ ದೊಡ್ಡವರು ಯಾರೂ ಇಲ್ಲ. ಹಾಗಾಗಿ ನನಗೆ ಅಹಂಕಾರದ ಅವಶ್ಯಕತೆಯಾದರೂ ಏನಿದೆ? ನಾನಂತೂ ಬಾಲಕನಂತೆ ಇರುತ್ತೇನೆ. ನಮಗೆ (ಜ್ಞಾನಿಗೆ) ಯಾರಾದರು ತೆಗಳಿದರೂ ಕೂಡ ನಾವು ಆಶೀರ್ವಾದವನ್ನು ನೀಡುತ್ತೇವೆ. ನಾವು ತಿಳಿದಿದ್ದೇವೆ ಆ ಬಡಪಾಯಿಗೆ ತಿಳುವಳಿಕೆಯೂ ಇಲ್ಲ ಹಾಗು ದೃಷ್ಟಿಯೂ ಇಲ್ಲ ಎಂದು. ಅವರನ್ನು ನಾವು ನಿರ್ದೋಷಿಗಳೆಂದು ಪರಿಗಣಿಸುತ್ತೇವೆ (ನೋಡುತ್ತೇವೆ). ಜಗತ್ತಿನಲ್ಲಿ ನಮಗೆ ಯಾರೂ ದೋಷಿಗಳೆಂದು ಕಾಣಿಸುವುದಿಲ್ಲ. ನಮಗೆ ಎಲ್ಲರ ಆತ್ಮವು ಗೋಚರಿಸುತ್ತದೆ ಹಾಗೂ ಪ್ರಕೃತಿಯು ಕಾಣಿಸುತ್ತದೆ. ಮೊದಲಿಗೆ ಪುರುಷನಾಗ ಬೇಕು, ನಂತರ ಪುರುಷನನ್ನು ಕಾಣಬೇಕು. ಅದರ ನಂತರ ಯಾರೂ ದೋಷಿಗಳೆಂದು ಕಾಣುವುದಿಲ್ಲ. ಭಗವಾನ್ ಮಹಾವೀರರು ಕೈವಲ್ಯ ಜ್ಞಾನದಲ್ಲಿ ಇರುವಾಗ, ಅವರಿಗೆ ಎಲ್ಲರೂ ಒಂದೇ ಸಮಾನದ ನಿರ್ದೋಷಿಗಳಂತೆ ತೋರುತ್ತಿದ್ದರು. ಅವರ ದೃಷ್ಟಿಯಲ್ಲಿ ಕಳ್ಳ ಕಳ್ಳತನ ಮಾಡಿದರೆ, ಅದು ಕೂಡಾ ಸರಿ ಮತ್ತು ದಾನಿ ದಾನ ನೀಡಿದರೆ, ಅದು ಕೂಡಾ ಸರಿ.

## ಅಹಂಕಾರದ ತೀರ್ಪು (Judgement)

**ದಾದಾಶ್ರೀ:** ನಿಮ್ಮಲ್ಲಿ ತಪ್ಪುಗಳು ಏನಾದರು ಇದೆಯೋ, ಇಲ್ಲವೋ?

**ಪ್ರಶ್ನಕರ್ತ:** ಹೌದು, ಬಹಳ ಇದೆ.

**ದಾದಾಶ್ರೀ:** ಎಷ್ಟು? ಎರಡೋ-ನಾಲ್ಕೋ ಇರಬಹುದಲ್ಲವೇ?

**ಪ್ರಶ್ನಕರ್ತ:** ನಮ್ಮಿಂದ ಎಲ್ಲೆಲ್ಲಿ ತಪ್ಪುಗಳಾಗಿದೆ ಎಂದು ವಿಚಾರವನ್ನು ಮಾಡಿದಾಗ, ಬಹಳಷ್ಟು ತಪ್ಪುಗಳು ಹೊರಗೆ ಬರುತ್ತವೆ, ಯಾಕೆಂದರೆ ಆತ್ಮದ 'ತೀರ್ಪು' ತಪ್ಪಾಗುವುದಿಲ್ಲ.

**ದಾದಾಶ್ರೀ:** ಇದು ಆತ್ಮದ 'ತೀರ್ಪು' ಅಲ್ಲ. ಇದು ಅಹಂಕಾರದ 'Judgement' ಆಗಿದೆ. ಅದೂ ಸಹ ಒಳ್ಳೆಯ 'Judgement ' ಮಾಡುತ್ತದೆ. ಅಹಂಕಾರವು ಶುದ್ಧ ವಸ್ತುವೇ ಆಗಿದೆ. ಅದನ್ನು ಎಷ್ಟು ಶುದ್ಧವಾಗಿ ಇಡಬಹುದೋ ಅಷ್ಟು ಶುದ್ಧವಾಗುತ್ತದೆ. ಆದರೂ ಅಹಂಕಾರದ ಮೂಲ ಗುಣ ಹೋಗುವುದಿಲ್ಲ. ಅಹಂಕಾರಕ್ಕೆ ಯಾವುದು ಅಭಿರುಚಿಯ (Interest) ವಸ್ತುವಾಗಿದೆಯೋ, ಅದನ್ನು ಮುಚ್ಚಿಡುತ್ತದೆ ಮತ್ತು ಅಲ್ಲಿ ನ್ಯಾಯ ಮಾಡಲು ಹೋಗುವುದಿಲ್ಲ. ಅಹಂಕಾರವು, ತನಗೆ ಯಾವುದರ ಬಗ್ಗೆ ಅಭಿರುಚಿ ಇರುತ್ತದೆಯೋ, ಅಲ್ಲೆಲ್ಲಾ ತಪ್ಪುಗಳನ್ನು ನೋಡುವುದಿಲ್ಲ. ಅಲ್ಲಿ ಎಲ್ಲಾ ತಪ್ಪುಗಳನ್ನು ಅಡಗಿಸಿ ಬಿಡುತ್ತದೆ.

**ಪ್ರಶ್ನಕರ್ತ:** ಅಹಂಕಾರವನ್ನು ಬಿಡಲು ಮಾರ್ಗ ಯಾವುದಾದರು ಇದೆಯೇ?

**ದಾದಾಶ್ರೀ:** ನಾವೇ ಬಿಡಿಸಿಕೊಡಬೇಕಾಗಿದೆ. ನಿಮ್ಮಿಂದ ಹೇಗೆ ಬಿಡಲು ಸಾಧ್ಯವಾಗುತ್ತದೆ? ಸ್ವತಃ ನೀವೇ ಅಹಂಕಾರದ ಬಂದಿಯಾಗಿದ್ದೀರಿ.

ಈ ಅಹಂಕಾರವು ಎಷ್ಟು ಉದ್ದ (length), ಎಷ್ಟು ಎತ್ತರ (height) ಹಾಗೂ ಎಷ್ಟು ಅಗಲ (breadth) ಇದೆ, ಎನ್ನುವುದು ಏನಾದರು ನಿಮಗೆ ತಿಳಿದಿದೆಯೇ? ಈ ಅಹಂಕಾರವು ಇಡೀ ಜಗತ್ತಿನಲ್ಲಿ ವ್ಯಾಪಕವಾಗಿ (Wide Spread) ಹರಡಿಕೊಂಡಿದೆ. ಅಹಂಕಾರದ ಉದ್ದ, ಅಗಲ, ಎತ್ತರ ಎಲ್ಲವೂ ದೊಡ್ಡ ಪ್ರಮಾಣದಲ್ಲಿದೆ, ಹಾಗಿರುವಾಗ ಅಹಂಕಾರವನ್ನು ಹೇಗೆ ತೆಗೆಯುವುದು? ಹೇಗೆ ಭಗವಂತನ ವಿರಾಟ ಸ್ವರೂಪವಿದೆಯೋ, ಹಾಗೆ ಅಹಂಕಾರದ ಸ್ವರೂಪವಾಗಿದೆ. ನಿಮಗೆ ಅಹಂಕಾರವನ್ನು ತೆಗೆಯಬೇಕೇ? ಹಾಗಿದ್ದರೆ ನಾವು ತೆಗೆದುಬಿಡುತ್ತೇವೆ. ನಮ್ಮ ಬಳಿ ಆ ಜ್ಞಾನವಿದೆ.

ಅಹಂಕಾರವು ಹೊರಟು ಹೋದರೆ ಆನಂತರ ಅಹಂಕಾರದ ಮಕ್ಕಳಿದ್ದಾರಲ್ಲಾ, ಕ್ರೋಧ-ಮಾನ-ಮಾಯಾ-ಲೋಭ, ಅವೆಲ್ಲವೂ ಅವುಗಳ ಹಾಸಿಗೆ ಸುತ್ತಿಕೊಂಡು ಹೊರಟು ಹೋಗುತ್ತವೆ. ಆಮೇಲೆ ದೇಹದಲ್ಲಿ ಏನು ಅಲ್ಪ ಸ್ವಲ್ಪ ಉಳಿದಿರುವುದೋ, ಅದು ನಿರ್ಜೀವವಾದ ಅಹಂಕಾರ ಹಾಗೂ ನಿರ್ಜೀವವಾದ ಕ್ರೋಧ-ಮಾನ-ಮಾಯಾ-ಲೋಭಗಳಾಗಿರುತ್ತವೆ, ಅವು ಸಜೀವವಾಗಿರುವುದಿಲ್ಲ. ನಂತರದಲ್ಲಿ ಕ್ರೋಧವು ನಿಮಗೆ ಬರುವುದೇ ಇಲ್ಲ, ಶರೀರವು ವ್ಯಕ್ತಪಡಿಸುತ್ತದೆಯಾದರೂ ಅದು ನಿರ್ಜೀವವಾಗಿರುತ್ತದೆ. ನಿರ್ಜೀವ ಎಂದರೆ ನಾಟಕೀಯದ (dramatic) ಹಾಗೆ ತೋರುತ್ತದೆ. ಹೇಗೆ ನಾಟಕದಲ್ಲಿ ನಟಿಸುವವನು, 'ನಾನು ರಾಜ' ಎಂದು ರಾಜನ ಪಾತ್ರವಹಿಸಿದ್ದರೂ, 'ತಾನು ಒಬ್ಬ ಬ್ರಾಹ್ಮಣ, ಇದು ಕೇವಲ Drama' ಎಂದು ಅವನಿಗೆ ತಿಳಿದಿರುತ್ತದೆಯಲ್ಲಾ, ಹಾಗೆ!

## ನಿರಹಂಕಾರಿಯ ಸಂಸಾರವನ್ನು ಯಾರು ನಡೆಸುತ್ತಾರೆ?

ನಮ್ಮ (ಜ್ಞಾನಿಗಳ) ಅಹಂಕಾರವು ಪೂರ್ಣವಾಗಿ ಸಮಾಪ್ತಿಯಾಗಿದೆ. ವಿಜ್ಞಾನಿಗಳು ಕೇಳುತ್ತಾರೆ ಏನೆಂದರೆ, 'ನಿಮ್ಮ ಅಹಂಕಾರವು ಪೂರ್ಣವಾಗಿ ಹೋಗಿದೆಯಾದರೆ, ನೀವು ಕೆಲಸ ಮಾಡಲು ಹೇಗೆ ಸಾಧ್ಯ?' ಆಗ ನಾವು ಹೇಳುತ್ತೇವೆ, 'ನಮ್ಮ ನಿರ್ಜೀವವಾದ ಅಹಂಕಾರ

ಇದೆಯಲ್ಲ' ಎಂದು ಈ ಬುಗುರಿಯನ್ನು ಆಡಿಸುವುದು ಗೊತ್ತಿದೆಯಲ್ಲವೇ? ಅದನ್ನು ಹೇಗೆ ಬೀಸಿಬಿಟ್ಟಾಗ, ತಿರುಗುತ್ತಲೇ ಇರುತ್ತದೆ. ಹೇಗೆ ಅದು ತಿರುಗುತ್ತದೆ? ಅಲ್ಲದೆ, ಆ ಬೀಸಿದ ಬುಗುರಿಯು ನಿರ್ಜೀವವಾಗಿದೆ! ಅದೇ ರೀತಿ ಈ ನಮ್ಮ ಅಹಂಕಾರವು ಕೂಡ ನಿರ್ಜೀವ ಅಹಂಕಾರವಾಗಿದೆ. ನಿಮ್ಮಲ್ಲಿ, ಸಜೀವ ಅಹಂಕಾರವೂ ಇದೆ ಮತ್ತು ನಿರ್ಜೀವ ಅಹಂಕಾರವೂ ಇದೆ. ನಿರ್ಜೀವ ಅಹಂಕಾರದಿಂದ ಕರ್ಮಫಲವು ದೊರಕುತ್ತದೆ ಹಾಗು ಸಜೀವ ಅಹಂಕಾರದಿಂದ ಮುಂದಿನ ಜನ್ಮಕ್ಕಾಗಿ ಕರ್ಮಬಂಧನವಾಗುತ್ತದೆ.

ಸಜೀವ ಅಹಂಕಾರದಿಂದಾಗಿ ಮುಂದಿನ ಜನ್ಮದ ಮನಸ್ಸು-ವಚನ-ಕಾಯದ ಹೊಸ ಬ್ಯಾಟರಿ Charge ಮಾಡಿಕೊಳ್ಳಲಾಗುತ್ತದೆ ಹಾಗು ನಿರ್ಜೀವ ಅಹಂಕಾರದಿಂದ ಈಗಿನ ಮನಸ್ಸು-ವಚನ-ಕಾಯದ ಹಳೆಯ (ಹಿಂದಿನ ಜನ್ಮದಲ್ಲಿ Charge ಆಗಿರುವ) ಬ್ಯಾಟರಿ Discharge ಆಗುತ್ತದೆ. ಹೀಗೆ ನಿಮ್ಮಲ್ಲಿ Charge ಹಾಗು Discharge ಎರಡೂ ನಡೆಯುತಲಿದೆ. ನಾವು ನಿಮ್ಮ Charge ಅನ್ನು ನಿಲ್ಲಿಸಿ ಬಿಡುತ್ತೇವೆ. ಆಮೇಲೆ ಬರೀ Discharge ಮಾತ್ರ ಉಳಿದಿರುತ್ತದೆ. ಕೇವಲ ಸಂಸಾರವನ್ನು ನಡೆಸಲು ಎಷ್ಟು ಅಹಂಕಾರದ ಅವಶ್ಯಕತೆ ಇದೆಯೋ, ಅಷ್ಟು Discharge ರೂಪದ ಅಹಂಕಾರ ಮಾತ್ರ ಉಳಿದಿರುತ್ತದೆ. ಅಲ್ಲಿ Charge ರೂಪದ ಅಹಂಕಾರವು ಇರುವುದಿಲ್ಲ.

ಆತ್ಮವು ಪ್ರಾಪ್ತಿಯಾದ ಬಳಿಕ, ಯಾರೇ ಅವಹೇಳನ ಮಾಡಿದರೂ, ಏನೇ ಮಾಡಿದರೂ, ಅದ್ಯಾವುದೂ ಸ್ಪರ್ಶವಾಗುವುದಿಲ್ಲ. ಆತ್ಮ ಪ್ರಾಪ್ತಿಯಾದ ಬಳಿಕ ಅಹಂಕಾರವು ಹೊರಟುಹೋಗುತ್ತದೆ. ಅನಂತರದಲ್ಲಿ ಇರುವ ಅಹಂಕಾರವು ಸಂಸಾರದ ಕೆಲಸವನ್ನು ಮಾಡುವಂತಹ ನಿರ್ಜೀವವಾದ ಅಹಂಕಾರ ಮಾತ್ರ ಇರುತ್ತದೆ. ಸಜೀವ ಅಹಂಕಾರವು ಇರುವುದಿಲ್ಲ.

ಅಹಂಕಾರವನ್ನು ಮುಕ್ತವಾಗಿಸಬೇಕಾಗಿದೆ. ಅಹಂಕಾರವು ಸಂಪೂರ್ಣವಾಗಿ ಮುಕ್ತವಾದರೆ, ಮುಕ್ತಿ ದೊರೆತಂತೆ.

## ಜ್ಞಾನಿಗಳ ಭಾಷೆಯಲ್ಲಿ ಜನನ-ಮರಣವು ಯಾರಿಗೆ?

**ಪ್ರಶ್ನಕರ್ತ:** ಆತ್ಮ ಅಮರವಾಗಿದೆ ಇದರ ಅರ್ಥವೇನು?

**ದಾದಾಶ್ರೀ:** ಅಮರ ಅಂದರೆ ಸನಾತನವಾಗಿದೆ. ಯಾವ ವಸ್ತು Real ಆಗಿದೆ, ಅದು ಸನಾತನವಾಗಿದೆ. ಸನಾತನವೇ ಅಮರವೆಂದು. ಸನಾತನವೆಂದರೆ ಶಾಶ್ವತ, Permanent! ಆತ್ಮವು Permanent ಆಗಿದೆ. ನೀವು ಪಂಚೇಂದ್ರಿಯಗಳಿಂದ ಏನೆಲ್ಲಾ ಅನುಭವಿಸುವಿರೋ, ಅವೆಲ್ಲವೂ Relative ಆಗಿದೆ. ಅವುಗಳು ಅವಸ್ಥೆಗಳಾಗಿವೆ ಹಾಗೂ ಅವಸ್ಥೆಯು (ಸ್ಥಿತಿಯು) Temporary Adjustment ಆಗಿದೆ, ವಿನಾಶಿಯಾಗಿದೆ.

**ಪ್ರಶ್ನಕರ್ತ:** ಇಲ್ಲಿ ಮರಣ ಹೊಂದುವವ ಯಾರು?

**ದಾದಾಶ್ರೀ:** 'ತಾನು' ಮರಣ ಹೊಂದುವುದೇ ಇಲ್ಲ. ಯಾವ ಅಹಂಕಾರವಿದೆಯೋ, ಅದು ಮರಣಹೊಂದುತ್ತದೆ. ಏಕೆಂದರೆ ಅದು 'ನಾನು, ನಾನು' ಎಂದು ಹೇಳುತ್ತಲೇ ಇರುತ್ತದೆ. ಎಲ್ಲಿ ಅಹಂಕಾರ ಇರುವುದಿಲ್ಲವೋ, ಅದು 'ತಾನೇ' ಆಗಿದೆ. 'ತನ್ನನ್ನು ತಾನು' ತಿಳಿದ ಮೇಲೆ 'ತಾನು' ಎಂದೂ ಮರಣಹೊಂದುವುದಿಲ್ಲ. ಅಹಂಕಾರಕ್ಕೆ ಮರಣದ ಭಯವಿದೆ. ಈ ಅಹಂಕಾರದಿಂದಾಗಿ ಕ್ಷಣ ಮಾತ್ರದಲ್ಲಿ ಏರುತ್ತದೆ (Elevate) ಹಾಗೂ ಕ್ಷಣ ಮಾತ್ರದಲ್ಲಿ ತಗ್ಗುತ್ತದೆ (Depress). ಅಹಂಕಾರವು (Egoism) ಹೊರಟುಹೋದರೆ, ಮತ್ತೆಂದೂ ಖಿನ್ನತೆಯು (Depress) ಕಾಡುವುದಿಲ್ಲ.

ಭಗವಾನ್ ಮಹಾವೀರರು ಹೇಳುತ್ತಾರೆ, 'ಜಗತ್ತಿನಲ್ಲಿ ಯಾರೂ ಮರಣಹೊಂದುವುದಿಲ್ಲ' ಎಂದು. ಆದರೂ ಎಲ್ಲಾ ಜನರು ರೋಧಿಸುತ್ತಾರೆ, ಯಾಕೆ? ಜನರು, 'ನಮಗೆ ಹಾಗೆ (ಮರಣ ಹೊಂದುವುದಿಲ್ಲವೆಂದು) ಕಾಣಿಸುವುದಿಲ್ಲ' ಎಂದು ಹೇಳುತ್ತಾರೆ. ಆದರೆ ನಾನು ಹೇಳುತ್ತೇನೆ, 'ನಮ್ಮ ದೃಷ್ಟಿಯಿಂದ ನೋಡಿ, ಜ್ಞಾನಿ ಪುರುಷರ ದೃಷ್ಟಿಯಿಂದ ನೋಡಿ.' ನಾವು ನೋಡಿಬಿಟ್ಟಿದ್ದೇವೆ ಈ ಜಗತ್ತಿನಲ್ಲಿ ಯಾರೂ ಮರಣಹೊಂದುವುದಿಲ್ಲವೆಂದು. ಆದರೂ ಜನ ದುಃಖಿಸುತ್ತಾರೆ, ನಮ್ಮ ಅಣ್ಣ ಮೃತ್ಯುಹೊಂದಿದರು, ನಮ್ಮ ಅಳಿಯ ಮೃತ್ಯುಹೊಂದಿದರು ಎಂದು. ಅರೇ, ಸುಮ್ಮನೆ ಯಾಕೆ ವ್ಯಥೆಪಡುತ್ತೀರ? ಇದೆಲ್ಲಾ ಕೇವಲ ಅವಸ್ಥೆಗಳ ವಿನಾಶವಾಗಿವೆ, ಮೂಲ ವಸ್ತುವು ಸನಾತನವಾಗಿದೆ. ನೀವು ಸನಾತನವಾಗಿರುವಾಗ, ನಿಮಗೇನೂ ಆಗುವುದಿಲ್ಲ ಮತ್ತು ನೀವು ಅವಸ್ಥೆಗಳ ರೂಪವಾದಾಗ ಮಾತ್ರ ನಿಮ್ಮ ವಿನಾಶವಾಗುವುದು.

ವಿಚಾರಗಳನ್ನು ಅರ್ಥಮಾಡಿಕೊಳ್ಳುವುದು ಬಹಳ ಮುಖ್ಯವಾಗಿದೆ. ನಾನು ವೈಜ್ಞಾನಿಕವಾದ ವಿಚಾರವನ್ನು ತಿಳಿಸಿಕೊಡುತ್ತೇನೆ. ವೈಜ್ಞಾನಿಕ ಎಂದರೆ, ಯಾವುದು 'ಇದೆಯೋ ಅದು ಇದ್ದೇ ಇದೆ' ಹಾಗೂ ಯಾವುದು 'ಇಲ್ಲವೋ, ಅದು ಇಲ್ಲವೇ ಇಲ್ಲ' ಎಲ್ಲವನ್ನು ಹೇಗಿದೆಯೋ

ಹಾಗೆಯೇ ಹೇಳುತ್ತೇನೆ. ಯಾವುದು 'ಇಲ್ಲವೋ' ಅದನ್ನು ನಾವು 'ಇದೆ' ಎಂದು ಹೇಳುವುದಿಲ್ಲ. ನೀವು 'ಅಂಥದ್ದು ಏನಾದರು ಇರಬಹುದು' ಎಂದು ಹೇಳಿದರೂ, ಆಗ ಕೂಡ ನಾವು ಹೇಳುತ್ತವೆ 'ಅದು ಇಲ್ಲ' ಎಂದು. ಅದರಿಂದ ನಿಮಗೆ ಬೇಸರವು ಉಂಟಾದರೂ ಕೂಡಾ ನಾವು 'ಇಲ್ಲದೆ' ಇರುವುದನ್ನು ಎಂದೂ 'ಇದೆ' ಎಂದು ಹೇಳುವುದಿಲ್ಲ. ಏಕೆಂದರೆ ಅದು ನಮ್ಮ ಜವಾಬ್ದಾರಿಯಾಗಿದೆ. ನಾವು ಯಾವ ವಿಚಾರಗಳನ್ನು ಹೇಳುತ್ತೇವೆ, ಅಲ್ಲದೆ ನಾವು ಈ ಇಪ್ಪತ್ತೆರಡು ವರ್ಷಗಳಲ್ಲಿ ಏನೆಲ್ಲಾ ಹೇಳಿದ್ದೇವೆ, ಅದರಿಂದ ಯಾವುದಾದರೂ ಒಂದು ವಿಚಾರದ ಬಗ್ಗೆ ನೀವು, 'ನಮಗೆ ಹಿಂದೆ ಹೀಗೆಂದು ಹೇಳಿರುವಿರಿ, ಈಗ ಅದರ ವಿವರಣೆಯನ್ನು ಕೊಡಿ' ಎಂದು ಕೇಳಿದರೆ, ನಾವು ವಿವರಿಸಿ ಹೇಳಲು ಶಕ್ಯರಿದ್ದೇವೆ. ನಾವು ಪ್ರತಿಯೊಂದು ವಸ್ತುವಿನ ಬಗ್ಗೆ ವಿಸ್ತಾರವಾಗಿ ತಿಳಿಸಲು ಸಿದ್ಧರಿದ್ದೇವೆ. ಈ ಜಗತ್ತು ಸ್ವಯಂ ಗೊಂದಲ (Puzzle) ಆಗಿಬಿಟ್ಟಿದೆ! ನಾವು ಸ್ವತಃ ನೋಡಿದ್ದೇವೆ ಹೇಗೆ ಗೊಂದಲಮಯವಾಗಿದೆ ಎಂದು.

**ಪ್ರಶ್ನಕರ್ತ:** ಆಂಗ್ಲಭಾಷೆಯಲ್ಲಿ Soul ಎಂದು ಕರೆಯುತ್ತಾರಲ್ಲವೇ, ಅದು ಆತ್ಮವೇ?

**ದಾದಾಶ್ರೀ:** ಆ ಜನರು Soul ಎಂದು ಹೇಳುತ್ತಾರೆ, ಆದರೆ Soul (ಆತ್ಮ) ಎನ್ನುವುದು ಎಂತಹ ವಸ್ತುವೆಂದು ಅವರು ಅರಿತಿಲ್ಲ. ಆತ್ಮವು ಬೇರೆಯೇ ವಸ್ತುವಾಗಿದೆ. ಆತ್ಮವು ಪ್ರಕಾಶವಾಗಿದೆ. ಅದಕ್ಕೆ ಆತ್ಮ ಎಂದು ಕೇವಲ ಹೆಸರನ್ನು ಕೊಡಲಾಗಿದೆ. ಆತ್ಮವು ವಸ್ತುವಾಗಿದೆ. ನಾಲ್ಕು ವೇದಗಳನ್ನು ಓದಿದರೂ ಸಹ ಅದರಲ್ಲಿ ಆತ್ಮವು ಸಿಗುವುದಿಲ್ಲ. ಎಲ್ಲಾ ಜನರು ಆತ್ಮದ ಹುಡುಕಾಟದಲ್ಲಿದ್ದಾರೆ. ಆದರೆ ಆತ್ಮವು ಸ್ಥೂಲ ವಸ್ತುವೂ ಅಲ್ಲ, ಸೂಕ್ಷ್ಮ ವಸ್ತುವೂ ಅಲ್ಲ, ಸೂಕ್ಷ್ಮತರ ವಸ್ತು ಕೂಡಾ ಅದಲ್ಲ. ಆತ್ಮವು ಸೂಕ್ಷ್ಮತಮ್ ವಸ್ತುವಾಗಿದೆ. ಪುಸ್ತಕವು ಸ್ಥೂಲವಾಗಿದೆ, ಶಬ್ದವೂ ಸ್ಥೂಲವಾಗಿದೆ. ಪುಸ್ತಕದಲ್ಲಿ ಕೇವಲ ಸ್ಥೂಲ ವಿಚಾರಗಳಿವೆ. ಸೂಕ್ಷ್ಮ, ಸೂಕ್ಷ್ಮತರ, ಸೂಕ್ಷ್ಮತಮ್ ವಿಚಾರಗಳು ಎಲ್ಲಿಯೂ ಇಲ್ಲವೇ ಇಲ್ಲ. ಹೀಗಿರುವಾಗ, ಎಲ್ಲಿ ಆತ್ಮದ ಅನ್ವೇಷಣೆ ಮಾಡುವುದು? Go to 'ಜ್ಞಾನಿ.' 'ಜ್ಞಾನಿ ಪುರುಷರ' ಬಳಿಗೆ ಹೋದರೆ, ಎಲ್ಲವೂ ಪ್ರಾಪ್ತಿಯಾಗುವುದು.

## ಅಹಂಕಾರವು, ಧ್ಯಾನದಲ್ಲಿ ಇಲ್ಲ ಆದರೆ ಕ್ರಿಯೆಯಲ್ಲಿ

**ಪ್ರಶ್ನಕರ್ತ:** ನನ್ನಿಂದ ಸರಿಯಾಗಿ ಧ್ಯಾನ ಮಾಡಲು ಆಗುವುದಿಲ್ಲ. ಧ್ಯಾನವನ್ನು ಹೇಗೆ ಮಾಡಬೇಕು? ಅದನ್ನು ನನಗೆ ತಿಳಿಯಬೇಕಾಗಿದೆ.

**ದಾದಾಶ್ರೀ:** ಧ್ಯಾನವನ್ನು ನೀವು ಮಾಡುತ್ತಿರೋ ಅಥವಾ ಬೇರೆ ಯಾರೋ ಮಾಡುತ್ತಾರೋ?

**ಪ್ರಶ್ನಕರ್ತ:** ನಾನು ಮಾಡುತ್ತೇನೆ.

**ದಾದಾಶ್ರೀ:** ಎಂದಾದರೂ ನಿಮ್ಮಿಂದ ಧ್ಯಾನ ಮಾಡಲು ಆಗದೆ ಇದ್ದದ್ದು ಇದೆಯೇ?

**ಪ್ರಶ್ನಕರ್ತ:** ಹೌದು, ಹಾಗೆ ಆಗಿದೆ.

**ದಾದಾಶ್ರೀ:** ಅದಕ್ಕೆ ಕಾರಣವಿದೆ. ಎಲ್ಲಿಯವರೆಗೆ 'ನೀವು ಚಂದುಭಾಯ್' ಆಗಿರುವಿರೋ, ಅಲ್ಲಿಯವರೆಗೆ ಯಾವುದೇ ಕಾರ್ಯವು ಸರಿಯಾಗಿ ಆಗುವುದಿಲ್ಲ. ನೀವು ಚಂದುಭಾಯ್ ಎಂಬುದು ಎಷ್ಟು ಶೇಕಡಾ ನಿಜವಾಗಿದೆ?

**ಪ್ರಶ್ನಕರ್ತ:** ಶೇಕಡಾ ನೂರಕ್ಕೆ ನೂರು.

**ದಾದಾಶ್ರೀ:** ಎಲ್ಲಿಯವರೆಗೆ, 'ನಾನು ಚಂದುಭಾಯ್' ಎಂಬ wrong belief ಇರುವುದೋ, ಅಲ್ಲಿಯವರೆಗೆ 'ನಾನು ಇದು ಮಾಡಿದೆ, ನಾನು ಅದು ಮಾಡಿದೆ' ಎಂಬ ಅಹಂಕಾರವಿರುತ್ತದೆ. ಯಾವುದೇ ಕಾರ್ಯವನ್ನು ಮಾಡಬೇಕಿದ್ದರೂ, ಅದರ ಕರ್ತನಾಗಿ ಅಹಂಕಾರವಿರುವುದು ಹಾಗೂ ಕರ್ತನಾಗಿ ಅಹಂಕಾರವು ಬೆಳೆದಷ್ಟು ಭಗವಂತ ದೂರ ಸರಿಯುವನು. ಒಂದು ವೇಳೆ ನಿಮಗೆ ಪರಮಾತ್ಮ ಪದವನ್ನು ಪ್ರಾಪ್ತಿ ಮಾಡಿಕೊಳ್ಳಬೇಕೆಂದಿದ್ದರೆ, ಆಗ 'ಜ್ಞಾನಿಗಳ' ಬಳಿ ಜ್ಞಾನ ಪಡೆದುಕೊಳ್ಳಬೇಕು. ಇದರಿಂದ, ನಿಮ್ಮ ಅಹಂಕಾರವು ನಿರ್ಮೂಲನೆಯಾಗುತ್ತದೆ ಮತ್ತು ನಿಮ್ಮ ಕಾರ್ಯವು ನೆರವೇರುತ್ತದೆ.

ಧ್ಯಾನ ಮಾಡಲು ಯಾರಿಗೂ ಬರುವುದಿಲ್ಲ. ಯಾವ ಧ್ಯಾನವನ್ನು 'ಮಾಡ'ಬೇಕಾಗಿ ಬರುವುದೋ, ಅದು ಅಹಂಕಾರದಿಂದಾಗಿದೆ. ಆದುದರಿಂದ ಅದನ್ನು ನಿಜವಾದ ಧ್ಯಾನವೆಂದು ಹೇಳಲು ಬರುವುದಿಲ್ಲ. ಅದನ್ನು ಏಕಾಗ್ರತೆಯೆಂದು ಕರೆಯಲಾಗುತ್ತದೆ. ಎಲ್ಲಿ ಅಹಂಕಾರ ಇಲ್ಲವೋ, ಅಲ್ಲಿ ಧ್ಯಾನವಿದೆ. ಧ್ಯಾನವನ್ನು ಅಹಂಕಾರದಿಂದ ಮಾಡಲು ಸಾಧ್ಯವಿಲ್ಲ. ಧ್ಯಾನವು ತಿಳಿದುಕೊಳ್ಳುವ ವಸ್ತುವಾಗಿದೆ, ಮಾಡಬೇಕಾದ ವಸ್ತುವಲ್ಲ. ಧ್ಯಾನ ಮತ್ತು ಏಕಾಗ್ರತೆಯಲ್ಲಿ ಬಹಳಷ್ಟು ಅಂತರವಿದೆ. ಏಕಾಗ್ರತೆಗೆ ಅಹಂಕಾರದ ಅವಶ್ಯಕತೆಯಿದೆ. ಆದರೆ ಧ್ಯಾನವು ಅಹಂಕಾರದಿಂದ ನಿರ್ಲಿಪ್ತವಾಗಿದೆ. ಅಹಂಕಾರದ ಏರಿಳಿತವು ನಿಮ್ಮ ಗಮನಕ್ಕೆ ಬರುತ್ತದೆಯೋ ಇಲ್ಲವೋ?

**ಪ್ರಶ್ನಕರ್ತ:** ಹೌದು ಬರುತ್ತದೆ.

**ದಾದಾಶ್ರೀ:** ಅಹಂಕಾರದ ಏರಿಳಿತವನ್ನು ಲಕ್ಷ್ಯಯಲ್ಲಿ ಇಡುವುದರ ಹೆಸರೇ ಧ್ಯಾನವಾಗಿದೆ.

ಆರ್ತಧ್ಯಾನ ಹಾಗು ರೌದ್ರಧ್ಯಾನಗಳಲ್ಲಿ ಅಹಂಕಾರವು ಇರುವುದಿಲ್ಲ.

**ಪ್ರಶ್ನಕರ್ತ:** ಧರ್ಮಧ್ಯಾನದಲ್ಲಿ ಅಹಂಕಾರವು ಇರುತ್ತದೆಯೋ ಇಲ್ಲವೋ?

**ದಾದಾಶ್ರೀ:** ಅದರಲ್ಲಿ ಕೂಡ ಅಹಂಕಾರವು ಇರುವುದಿಲ್ಲ. ಧ್ಯಾನದಲ್ಲಿ ಅಹಂಕಾರವು ಇರುವುದಿಲ್ಲ, ಕ್ರಿಯೆಯಲ್ಲಿ ಅಹಂಕಾರವು ಇರುವುದು.

**ಪ್ರಶ್ನಕರ್ತ:** ರೌದ್ರಧ್ಯಾನ ಹಾಗು ಆರ್ತಧ್ಯಾನ ಆಗುವಲ್ಲಿ ಅಹಂಕಾರವು ನಿಮಿತ್ತವಾಗಿ ಇರುತ್ತದೆ ಅಲ್ಲವೇ?

**ದಾದಾಶ್ರೀ:** ಕೇವಲ ನಿಮಿತ್ತ ಮಾತ್ರವಲ್ಲ, ಅಲ್ಲಿ ಕ್ರಿಯೆ ಕೂಡ ಅಹಂಕಾರದಿಂದಾಗಿದೆ. ಕ್ರಿಯೆಯು ಇರುವಲ್ಲಿ ಧ್ಯಾನ ಇರುವುದಿಲ್ಲ. ಆದರೆ ಕ್ರಿಯೆಯಿಂದ ಯಾವ ಪರಿಣಾಮ ಉತ್ಪನ್ನವಾಗುವುದೋ ಅದು ಧ್ಯಾನವಾಗಿದೆ. ಹಾಗು ಯಾವ ಧ್ಯಾನ ಉತ್ಪನ್ನವಾಗುತ್ತದೆಯೋ, ಅದರಲ್ಲಿ ಅಹಂಕಾರವು ಇರುವುದಿಲ್ಲ. ಆರ್ತಧ್ಯಾನವಾದಾಗ, ಅದರಲ್ಲಿ 'ನಾನು ಆರ್ತಧ್ಯಾನ ಮಾಡುತ್ತೇನೆ' ಎನ್ನುವುದು ಇಲ್ಲದೆ ಹೋದರೆ, ಆಗ ಆ ಧ್ಯಾನದಲ್ಲಿ ಅಹಂಕಾರವು ಇರುವುದಿಲ್ಲ. ಅಹಂಕಾರವು ಮತ್ತೊಂದು ಕಡೆಯಲ್ಲಿ 'ಉಪಯೋಗ'ದಲ್ಲಿ ಇರುವಾಗಲೂ, ಧ್ಯಾನವು ತನ್ನಷ್ಟಕ್ಕೆ ಒಳಗೆ ನಡೆಯುತ್ತಲೇ ಇರುತ್ತದೆ.

**ಪ್ರಶ್ನಕರ್ತ:** ಧ್ಯಾನದಲ್ಲಿ ಅಹಂಕಾರವು ಇರುವುದಿಲ್ಲ, ಕರ್ತನೂ (ಮಾಡುವವನು) ಅಲ್ಲ, ಹೀಗಿರುವಾಗ ಯಾವ ರೀತಿಯಲ್ಲಿ ಕರ್ಮಬಂಧನವಾಗುತ್ತದೆ?

**ದಾದಾಶ್ರೀ:** ಈ ಆರ್ತಧ್ಯಾನವು ಆಗುವಾಗ 'ನನ್ನಿಂದ ಆರ್ತಧ್ಯಾನವಾಗಿದೆ' ಎಂದು ಅಂದುಕೊಂಡಾಗ, ಅಲ್ಲಿ ಕರ್ತನಾಗುತ್ತಾನೆ ಹಾಗೂ ಅದರ ಬಂಧನವಾಗುತ್ತದೆ.

**ಪ್ರಶ್ನಕರ್ತ:** ನೀವು ಹೇಳಿದ್ದಿರಿ, ಧ್ಯೇಯವು ನಿರ್ಣಯವಾದ ಮೇಲೆ ತಾನು ಧ್ಯಾತನಾಗುತ್ತಾನೆ, ಆಗ ಧ್ಯಾನವು ಉತ್ಪನ್ನವಾಗುತ್ತದೆ. ಇದರಲ್ಲಿ ಅಹಂಕಾರದ ಅವಶ್ಯಕತೆ ಇರುವುದಿಲ್ಲವೇ?

**ದಾದಾಶ್ರೀ:** ಅದರಲ್ಲಿ ಅಹಂಕಾರವು ಇರಬಹುದು ಅಥವಾ ಇಲ್ಲದೆ ಇರಬಹುದು. ನಿರಹಂಕಾರವು ಧ್ಯಾತನಾದಾಗ ಶುಕ್ಲಧ್ಯಾನವು ಉತ್ಪನ್ನವಾಗುತ್ತದೆ. ಇಲ್ಲವಾದರೆ ಧರ್ಮಧ್ಯಾನ ಅಥವಾ ಆರ್ತಧ್ಯಾನ ಅಥವಾ ರೌದ್ರಧ್ಯಾನವು ಉತ್ಪನ್ನವಾಗುತ್ತದೆ.

**ಪ್ರಶ್ನಕರ್ತ:** ಧ್ಯಾತ ಪದದಲ್ಲಿ ಅಹಂಕಾರಿಯಾಗಿರಲಿ ಅಥವಾ ನಿರಹಂಕಾರಿಯಾಗಿರಲಿ, ಆದರೆ

ಅದರ ಪರಿಣಾಮ ಸ್ವರೂಪವಾಗಿ ಉತ್ಪನ್ನವಾಗುವ ಧ್ಯಾನದಲ್ಲಿ ಅಹಂಕಾರವು ಇರುವುದಿಲ್ಲ ಅಲ್ಲವೇ?

**ದಾದಾಶ್ರೀ:** ಹೌದು. ಶುಕ್ಲಧ್ಯಾನದ ಪರಿಣಾಮವು ಯಾವಾಗ ಬರುವುದೋ, ಆಗ ಮೋಕ್ಷ ಪ್ರಾಪ್ತಿಯಾಗುತ್ತದೆ.

**ಪ್ರಶ್ನಕರ್ತ:** ಧ್ಯೇಯವು ನಿಶ್ಚಯವಾದಾಗ, ಅದರಲ್ಲಿ ಅಹಂಕಾರದ ಪಾತ್ರವೇನಾದರು ಇದೆಯೇ?

**ದಾದಾಶ್ರೀ:** ಧ್ಯೇಯವನ್ನು ಅಹಂಕಾರವೇ ನಿಶ್ಚಯ ಮಾಡುತ್ತದೆ. ಮೋಕ್ಷದ ಧ್ಯೇಯ ಮತ್ತು ಧ್ಯಾತ ನಿರಹಂಕಾರಿಯಾದಾಗ, ಶುಕ್ಲಧ್ಯಾನವು ಉಂಟಾಗುವುದು.

**ಪ್ರಶ್ನಕರ್ತ:** ಧರ್ಮಧ್ಯಾನದ ಧ್ಯೇಯದಲ್ಲಿ ಅಹಂಕಾರದ ಸೂಕ್ಷ್ಮ ಹಾಜರಿ ಇದೆಯೇ?

**ದಾದಾಶ್ರೀ:** ಹೌದು. ಅಹಂಕಾರದ ಉಪಸ್ಥಿತಿ ಇಲ್ಲದೆ ಧರ್ಮಧ್ಯಾನವು ಉಂಟಾಗುವುದೇ ಇಲ್ಲ.

**ಪ್ರಶ್ನಕರ್ತ:** ಆರ್ತ, ರೌದ್ರ ಹಾಗೂ ಧರ್ಮಧ್ಯಾನ, ಇವುಗಳನ್ನು ಪುದ್ಗಲ್ ಪರಿಣಾಮವೆಂದು ಹೇಳಬಹುದೆ?

**ದಾದಾಶ್ರೀ:** ಹೌದು, ಅವುಗಳನ್ನು ಪುದ್ಗಲ್ ಪರಿಣಾಮವೆಂದು ಕರೆಯಲಾಗುತ್ತದೆ ಹಾಗೂ ಶುಕ್ಲಧ್ಯಾನವು ಸ್ವಾಭಾವಿಕ ಪರಿಣಾಮವಾಗಿದೆ.

**ಪ್ರಶ್ನಕರ್ತ:** ಹಾಗಾದರೆ, ಶುಕ್ಲಧ್ಯಾನವು, ಆತ್ಮದ ಪರಿಣಾಮವಾಗಿದೆ ಅಲ್ಲವೇ?

**ದಾದಾಶ್ರೀ:** ಹೌದು.

**ಪ್ರಶ್ನಕರ್ತ:** ಶುಕ್ಲಧ್ಯಾನವಾಗಿದ್ದರೆ, ಅದರಿಂದ ಯಾವ ಕರ್ಮವಾಗುವುದೋ, ಅದು ಬಹಳ ಒಳ್ಳೆಯದ್ದಾಗಿರುತ್ತದೆ ಹಾಗೂ ಧರ್ಮಧ್ಯಾನವಾಗಿದ್ದರೆ, ಆಗ ಅದು ಸ್ವಲ್ಪ ಕಡಿಮೆ ಗುಣಮಟ್ಟದ ಕರ್ಮವಾಗಿರುತ್ತದೆ. ಇದು ಸರಿಯೇ?

**ದಾದಾಶ್ರೀ:** ಶುಕ್ಲಧ್ಯಾನವಾಗಿದ್ದರೆ, ಆಗ ಕ್ರಮ (ಕ್ರಮಿಕ್) ಮಾರ್ಗದಲ್ಲಿ ಕರ್ಮವು ಇರುವುದೇ ಇಲ್ಲ. ಇದು ಅಕ್ರಮ (ಅಕ್ರಮ್) ಮಾರ್ಗವಾಗಿರುವುದರಿಂದ, ಇಲ್ಲಿ ಕರ್ಮವು ಇರುತ್ತದೆ. ಆದರೆ ಇದರಲ್ಲಿ ತಾನು ಕರ್ತನಾಗದೆ, ಕೇವಲ ಕರ್ಮವನ್ನು ಬರಿದಾಗಿಸುವ ಭಾವದಿಂದ ನಡೆಯುವುದು. ಇಲ್ಲಿ (ಅಕ್ರಮ್ ಮಾರ್ಗದಲ್ಲಿ) ಕರ್ಮವನ್ನು ಮುಗಿಸದೆಯೇ 'ಜ್ಞಾನವು' ಪ್ರಾಪ್ತಿಯಾಗಿದೆ ಅಲ್ಲವೇ!

ರಾಗ-ದ್ವೇಷಗಳಿಂದ ಮುಕ್ತರಾಗಲು ಧ್ಯಾನ ಮಾಡಬೇಕಾಗಿಲ್ಲ, ಕೇವಲ ವಿತರಾಗ ವಿಜ್ಞಾನವನ್ನು ತಿಳಿಯಬೇಕಾಗಿದೆ.

## ಅಹಂಕಾರವು ವಿಲಯವಾಗುವುದು ಹೇಗೆ?

ನಿಮಗೆ ಅಶಾಶ್ವತ (Temporary) ಸಮಾಧಾನ ಬೇಕೋ ಅಥವಾ ಶಾಶ್ವತ (Permanent) ಸಮಾಧಾನ ಬೇಕೋ?

**ಪ್ರಶ್ನಕರ್ತ:** ಶಾಶ್ವತವಾದ (Permanent) ಸಮಾಧಾನ ಬೇಕು.

**ದಾದಾಶ್ರೀ:** ಹಾಗಿದ್ದರೆ 'ನಾನು ಚಂದುಭಾಯ್' ಎಂದುಕೊಂಡು ಎಲ್ಲಿಯವರೆಗೆ ನಡೆಸುವಿರಿ? ಅದರ ವಿಶ್ವಾಸದ ಮೇಲೆ ಎಷ್ಟು ಸಮಯದವರೆಗೆ ನಡೆಸುವಿರಿ? ಈ ಹೆಸರನ್ನು ಹೇಗೆ ನಂಬುವುದು? ದೇಹವನ್ನು ಹೇಗೆ ನಂಬುವುದು? ನಾವು ಸ್ವತಃ ಯಾರು, ಎನ್ನುವುದರ ಶೋಧನೆಯನ್ನು ನಡೆಸಬೇಕಲ್ಲವೇ? ಅದನ್ನು ತಿಳಿದುಕೊಳ್ಳಬೇಕಲ್ಲವೇ? ಈ ಜ್ಞಾನವನ್ನು ಪಡೆದುಕೊಳ್ಳುವುದರಿಂದ ವ್ಯವಹಾರ ವೈವಾಟು ಈಗ ನಡೆಯುವುದಕ್ಕಿಂತಲೂ ಉತ್ತಮವಾಗಿ ನಡೆಯುತ್ತದೆ. ಅಲ್ಲದೆ, ಈಗ ನಡೆಸುತ್ತಿರುವ ವ್ಯವಹಾರದಲ್ಲಿ ಬಹಳಷ್ಟು ನಷ್ಟವು ಉಂಟಾಗುತ್ತಿದೆ, ಇದನ್ನು ಮಾಡುತ್ತಿರುವವರು ಯಾರು?

**ಪ್ರಶ್ನಕರ್ತ:** ಈ ಅಹಂಕಾರವೇ (Egoism) ನಷ್ಟವನ್ನು ಉಂಟುಮಾಡುವುದಾಗಿದೆ ಎಂದು ಪ್ರತಿಯೊಂದು ಹಂತದಲ್ಲೂ ಅನುಭವಕ್ಕೆ ಬರುತ್ತದೆ.

**ದಾದಾಶ್ರೀ:** ಹೌದು, ಅದಕ್ಕಾಗಿಯೇ ನಾವು ಅಹಂಕಾರವನ್ನು ತೆಗೆದುಬಿಡುತ್ತೇವೆ. ನಂತರ ಈ ನಷ್ಟ ಪಡಿಸುವವನು ಹೊರಟುಹೋಗುತ್ತಾನೆ ಹಾಗೂ ಅವನೊಂದಿಗೆ ಎಲ್ಲಾ ನಿರ್ಬಲತೆಯು (weakness) ಕೂಡಾ ಹೊರಟುಹೋಗುತ್ತವೆ. ಎಲ್ಲಾ ನಿರ್ಬಲತೆಗಳು (weakness) ಅಹಂಕಾರದಿಂದಾಗಿದೆ. ಆದುದರಿಂದ ಈ ಅಹಂಕಾರವು ಹೊರಟುಹೋದರೆ ಮತ್ತೆ ನಿರ್ಬಲತೆಯೂ (weakness) ಹೊರಟುಹೋಗುತ್ತದೆ. ನಂತರ 'ಚಂದುಭಾಯ್ ಯಾರು? ಹಾಗೂ ನೀನು ಯಾರು?' ಎನ್ನುವುದರ ಭೇದವು ತಿಳಿಯಲ್ಪಡುತ್ತದೆ.

**ಪ್ರಶ್ನಕರ್ತ:** ಆತ್ಮಸಾಕ್ಷಾತ್ಕಾರ (Self-Realisation) ಸಮೀಪಕ್ಕೆ ಹೋಗಬೇಕಾದರೆ 'ಅಹಂ' ನಷ್ಟವಾಗಬೇಕಲ್ಲವೇ?

**ದಾದಾಶ್ರೀ:** ಹೌದು, 'ನಾನು, ನನ್ನದು' ಇವೆಲ್ಲವೂ ನಾಶವಾಗಬೇಕಾಗಿದೆ. ನಮ್ಮಲ್ಲಿ ಅವೆಲ್ಲವೂ ನಶಿಸಿಹೋಗಿವೆ. ಈ 'ಪಟೇಲ'ನಿಗೆ ಯಾರು ನಿಂದನೆ ಮಾಡಿದರೂ 'ನಮಗೆ' ಸ್ಪರ್ಶಿಸುವುದಿಲ್ಲ. ಏಕೆಂದರೆ 'ನಾವು', 'ಪಟೇಲ'ನಲ್ಲ. ಎಲ್ಲಿಯವರೆಗೆ 'ನಾವು' 'ಪಟೇಲ' ಎಂದು ಭಾವಿಸಿಕೊಂಡಿರುತ್ತೇವೆ, ಅಲ್ಲಿಯವರೆಗೆ ಅಹಂಕಾರವಿರುತ್ತದೆ.

**ಪ್ರಶ್ನಕರ್ತ:** ಅಹಂಕಾರವನ್ನು ಹೋಗಲಾಡಿಸುವುದು, ಅದು ಕೂಡ ಬಹಳ ಕಷ್ಟಕರವಾಗಿದೆ ಅಲ್ಲವೇ?

**ದಾದಾಶ್ರೀ:** ಅಹಂಕಾರವನ್ನು ವೃದ್ಧಿಗೊಳಿಸುವುದು ಬಹಳ ಕಷ್ಟಕರವಾಗಿದೆ ಹಾಗೂ ಅಹಂಕಾರವನ್ನು ಅಂತ್ಯಗೊಳಿಸುವುದು ಕೂಡಾ ಬಹಳ ಕಷ್ಟಕರವಾಗಿದೆ. ಸಾಮಾನ್ಯ ಬಡಪಾಯಿ ಜನರಿಗೆ ಅಹಂಕಾರವನ್ನು ಬೆಳೆಸಿಕೊಳ್ಳಬೇಕೆಂದಿದ್ದರೂ, ಅದನ್ನು ವೃದ್ಧಿಸಿಕೊಳ್ಳಲಾಗುವುದಿಲ್ಲ.

ಅಹಂಕಾರವನ್ನು ಅಂತ್ಯಗೊಳಿಸಲು ಏನು ಮಾಡಬೇಕೆಂದರೆ, ಅಹಂಕಾರದ ಶೇಷವೂ ಇಲ್ಲದಿರುವಂತಹ ವ್ಯಕ್ತಿ ಯಾರು ಇರುತ್ತಾರೆ, ಅವರ ಬಳಿಗೆ ಹೋಗುವುದರಿಂದ, ಅವರ ಸನಿಹದಲ್ಲಿ ಕುಳಿತುಕೊಳ್ಳುವುದರಿಂದ ನಿಮ್ಮ ಅಹಂಕಾರ ಅಂತ್ಯಗೊಳ್ಳುತ್ತದೆ. ಅದುಬಿಟ್ಟು ಬೇರೆ ದಾರಿಯೂ ಇಲ್ಲ. ಅಹಂಕಾರವು ಇಲ್ಲದೆ ಇರುವಂತಹ ವ್ಯಕ್ತಿಯು ಯಾವಾಗಲೋ ಬಹಳ ವಿರಳವಾಗಿ ಈ ಭೂಮಿಯ ಮೇಲೆ ಬರುತ್ತಾರೆ, ಆಗ ನಮ್ಮ ಕಾರ್ಯವನ್ನು ಸಾಧಿಸಿಕೊಳ್ಳಬೇಕು.

**-ಜೈ ಸಚ್ಚಿದಾನಂದ್**

************

# ಸಂಪರ್ಕಿಸಿ


ದಾದಾ ಭಗವಾನ್ ಪರಿವಾರ

**ಅಡಾಲಜ್:** ತ್ರಿಮಂದಿರ್ ಸಂಕುಲ್, ಸೀಮಂಧರ್ ಸಿಟಿ, ಅಹಮದಾಬಾದ್-ಕಲೋಲ್ ಹೈವೇ, ಪೋಸ್ಟ್: ಅಡಾಲಜ್, ಜಿ.–ಗಾಂಧೀನಗರ್, ಗುಜರಾತ್–382421. ಫೋನ್: (079) 39830100, ಇಮೇಲ್: info@dadabhagwan.org

**ಅಹಮದಾಬಾದ್:** ದಾದಾ ದರ್ಶನ್, 5, ಮಮತಾಪಾರ್ಕ್ ಸೊಸೈಟಿ, ನವಗುಜರಾತ್ ಕಾಲೇಜಿನ ಹಿಂಭಾಗದಲ್ಲಿ, ಉಸ್ಮಾನ್‌ಪುರಾ, ಅಹಮದಾಬಾದ್ – 380014, ಫೋನ್: (079) 27540408

| | | | |
|---|---|---|---|
| **ಮುಂಬೈ** | 9323528901 | **ಬೆಂಗಳೂರು** | 9590979099 |
| **ದೆಹಲಿ** | 9810098564 | **ಹೈದರಾಬಾದ್** | 9989877786 |
| **ಕೊಲ್ಕತ್ತಾ** | (033)–32933885 | **ಚೆನ್ನೈ** | 9380159957 |
| **ಜಯಪುರ** | 9351408285 | **ಪೂನಾ** | 9422660497 |
| **ಭೂಪಾಲ** | 9425024405 | **ಯುಎಇ** | +971 557316937 |
| **ಇಂದೋರ್** | 9893545351 | **ಯು.ಕೆ.** | +44330–111–(3232) |
| **ಜಬಲ್ಪುರ** | 9425160428 | **ಕೀನ್ಯಾ** | +254 722 722 063 |
| **ರಾಯಪುರ** | 9329523737 | **ಸಿಂಗಪೂರ್** | +65 81129229 |
| **ಬಿಲಾಯ್** | 9827481336 | **ಆಸ್ಟ್ರೇಲಿಯಾ** | +61 421127947 |
| **ಪಟ್ನಾ** | 9431015601 | **ನ್ಯೂಜಿಲ್ಯಾಂಡ್** | +64 21 0376434 |
| **ಅಮರಾವತಿ** | 9422915064 | **ಯು.ಎಸ್.ಎ.** | +1 877–505–DADA (3232) |
| **ಜಲಂಧರ್** | 9814063043 | | |

Website: www.dadabhagwan.org



## ಅಂತಃಕರಣದ ಸ್ವರೂಪ

ಜ್ಞಾನಿಪುರುಷರು ಇಡೀ ವಿಶ್ವದ 'ಒಬ್ಸರ್ವೇಟರಿ' ಎಂದು ಕರೆಯಲ್ಪಡುತ್ತಾರೆ. ಬ್ರಹ್ಮಾಂಡದಲ್ಲಿ ಏನು ನಡೆಯುತ್ತಿದೆ, ಅದೆಲ್ಲವನ್ನು ಜ್ಞಾನಿಪುರುಷರು ತಿಳಿದಿರುತ್ತಾರೆ. ವೇದಕ್ಕಿಂತಲೂ ಮಿಗಿಲಾದ ವಿಚಾರಗಳನ್ನು ಜ್ಞಾನಿಪುರುಷರು ಹೇಳಬಲ್ಲರು.

ನೀವು ಏನು ಬೇಕಾದರೂ ಕೇಳಿ, ಅದು ನಮಗೆ ತಪ್ಪೆಂದು ಅನ್ನಿಸುವುದಿಲ್ಲ. ಇಡೀ ವಿಶ್ವದ ವಿಜ್ಞಾನಿಗಳು ಏನು ಕೇಳುತ್ತಾರೋ ಆ ಎಲ್ಲಾ ಜ್ಞಾನವನ್ನು ಕೊಡುತ್ತೇವೆ; ಈ ಮನಸ್ಸು ಎಂದರೆ ಏನು? ಎಲ್ಲಿಂದ ಇದರ ಜನ್ಮ ಉಂಟಾಗಿದೆ, ಹೇಗೆ ಇದರ ಅಂತ್ಯವಾಗುತ್ತದೆ? ಹೀಗೆ ಮನಸ್ಸಿನ, ಬುದ್ಧಿಯ, ಚಿತ್ತದ, ಅಹಂಕಾರದ, ಪ್ರತಿಯೊಂದು ವಸ್ತುವಿನ ಎಲ್ಲಾ ವಿಜ್ಞಾನವನ್ನು ಜಗತ್ತಿಗೆ ಕೊಡಲು ನಾವು ಬಂದಿದ್ದೇವೆ.

- ದಾದಾಶ್ರೀ




dadabhagwan.org




Printed in India

Price ₹ 20